

# ಸಪ್ತಗಿರಿ

ಜುಲೈ 1987

ಬೆಲೆ : ರೂ ೧

ತಿರುಮಲೆ ತಿರುಪತಿ ದೇವಸ್ಥಾನಗಳ ಸಚಿತ್ರ ಮಾಸ ಪತ್ರಿಕೆ



ಶರಣು ಶರಣಯ್ಯ ॥ ಪ ॥

ಶರಣು ಶ್ರೀ ವೈಕುಂಠನಾಯಕ
ಶರಣು ಶ್ರೀ ಪುರುಷೋತ್ತಮ
ಶರಣು ಶ್ರೀಧರ ಗರುಡವಾಹನ
ಶರಣು ವೆಂಕಟನಾಯಕ ॥ ೧ ॥

ಆದಿದೇವ ಮುನೀಂದ್ರ ವಂದಿತ
ಅಖಿಲ ಸುರಗಣ ಸೇವಿತ
ವೇದವೇದ್ಯ ವಿರಿಂಚಿ ಸನ್ನುತ
ವೆಂಕಟೇಶ ನಮೋ ನಮೋ ॥ ೨ ॥

ಶರಣು ಸುರಮುನಿ ಹೃದಯಪಾಲಕ
ಶರಣು ಭಕ್ತರ ರಕ್ಷಕ
ಶರಣು ಶ್ರೀ ಹಯವದನ ಮುಕ್ತಿದ
ಶರಣು ಓಂಕಾರ ನಾಮಕ ॥ ೩ ॥

—ಶ್ರೀ ವಾದಿರಾಜರು.

## ತಿರುಮಲೆ ತಿರುಪತಿ ದೇವಸ್ಥಾನಗಳು

# ಶ್ರೀವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ

ಅನ್ನದಾನ ಮಾಡುವುದಕ್ಕಿಂತ ಮಿಗಿಲಾದ ಪವಿತ್ರ ದಾನ ಮತ್ತೊಂದಿಲ್ಲ; ಅದರಲ್ಲೂ ಶ್ರೀ ವೆಂಕಟೇಶ್ವರಸ್ವಾಮಿಯ ಆವಾಸವಾದ ತಿರುಮಲೆಯಲ್ಲಿ ಯಾತ್ರಿಕರಿಗೆ ಅನ್ನದಾನ ಮಾಡುವುದು ಮತ್ತೂ ಪುಣ್ಯಕರವಾದದ್ದು. ತಿ. ತಿ. ದೇವಸ್ಥಾನಗಳು ತಿರುಮಲೆಯಲ್ಲಿ ಯಾತ್ರಿಕ ಭಕ್ತರಿಗೆ ಉಚಿತ ಭೋಜನ ನೀಡುವ 'ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ' ಯನ್ನು ಆಚರಣೆಗೆ ತಂದಿದೆ.

## ಯೋಜನೆಯ ಕಾರ್ಯರೂಪ :

* ಯಾರಾದರೂ 12.5 ಲಕ್ಷ ರೂಗಳು ಅಥವಾ ಅದರ ಗುಣಕಗಳನ್ನು ದತ್ತಿ ನೀಡಬಹುದು. ತಿ.ತಿ. ದೇವಸ್ಥಾನಗಳು ಈ ದತ್ತಿಗೆ ಸಮನಾದ ಧನವನ್ನು ಸೇರಿಸಿ, ಒಟ್ಟು ಮೊತ್ತದ ಮೇಲಿನ ವಾರ್ಷಿಕ ಬಡ್ಡಿಯಿಂದ ದಿನವೊಂದಕ್ಕೆ 500 ಮಂದಿಗೆ ಉಚಿತ ಭೋಜನ ವ್ಯವಸ್ಥೆ ಮಾಡುತ್ತದೆ. ರೂ 10 ಲಕ್ಷ ನೀಡಿದಲ್ಲಿ ಇನು ಮುಂದೆ ಪ್ರತಿದಿನ 400 ಮಂದಿಗೆ ಮಾತ್ರ ಉಚಿತ ಭೋಜನ ನೀಡಲಾಗುವುದು.
* ಈಗಾಗಲೇ ರೂ 10 ಲಕ್ಷ ದತ್ತಿ ನೀಡಿರುವವರ ಹೆಸರಿನಲ್ಲಿ ಪ್ರತಿದಿನ 500 ಮಂದಿಗೆ ಭೋಜನ ವ್ಯವಸ್ಥೆ ಮಾಡಲಾಗುವುದು. (ಉಳಿಕೆ ಹಣ ತಿ.ತಿ.ದೇ. ನಿಧಿಯಿಂದ ಹಾಕಲಾಗುತ್ತದೆ).
* ದತ್ತಿಯನ್ನು ವ್ಯಕ್ತಿ, ಸಂಸ್ಥೆ, ಸಂಘಗಳು ನೀಡಬಹುದು
* ಊಟದ ಕೋಣೆಯಲ್ಲಿ ದಾನಿಗಳ ಹೆಸರನ್ನು ಪ್ರಮುಖವಾಗಿರುವಂತೆ ಬರೆದಿಡಲಾಗುವುದು.

## ದಾನಿಗಳಿಗೆ ದೊರೆಯುವ ಸೌಲಭ್ಯಗಳು :

* ವರ್ಷಕ್ಕೊಮ್ಮೆ ಮೂರುದಿನಗಳ ಕಾಲ ತಿರುಮಲೆಯಲ್ಲಿ ದಾನಿಯ ಹಾಗೂ ಅವರ ಕುಟುಂಬದವರಿಗೆ ಉಚಿತ ವಸತಿ, ಹಾಗೂ ವಿರಾಮದ ವೇಳೆಯಲ್ಲಿ ದರ್ಶನ ಆರತಿಯನ್ನು ಒದಗಿಸಲಾಗುವುದು.
* ದಾನಿಗಳ ಈ ದಾನಕ್ಕೆ 80 (G) ಕಲಮಿನಂತೆ ಆದಾಯಕರ ಮಾಫಿ ಉಂಟು.
* ದಾನಿಗಳನ್ನು ಈ ಯೋಜನೆಯ ಕಾರ್ಯಾಚರಣೆಯ ಉಸ್ತುವಾರಿ ನೋಡಲು ಸಲಹಾಸಮಿತಿ ಸದಸ್ಯರನ್ನಾಗಿ ಮಾಡಿಕೊಳ್ಳಲಾಗುವುದು.
* ಈವರೆಗೆ ದತ್ತಿನೀಡಿದವರ ವಿವರಗಳು ಈ ರೀತಿ ಇವೆ.

| | | |
|---|---|---|
| 1. | ಶ್ರೀ ಎಲ್. ವಿ. ರಾಮಯ್ಯ, ಮದ್ರಾಸ್ | ರೂ 10 ಲಕ್ಷ |
| 2. | ಶ್ರೀ ಮಾನಸಿಂಗ್ ಕಾ, ಬೊಂಬಾಯಿ | ರೂ 20 ಲಕ್ಷ |
| 3. | ಶ್ರೀ ಆರ್. ಪಿ. ಗೋಯಂಕ, ಕಲ್ಕತ್ತ | ರೂ 10 ಲಕ್ಷ |
| 4. | ಶ್ರೀ ಈಶ್ವರಪ್ರಸಾದ ಪೋದ್ದಾರ್, ಕಲ್ಕತ್ತ | ರೂ 10 ಲಕ್ಷ |
| 5. | ಶ್ರೀ ಧೀರೂಭಾಯಿ ಅಂಬಾನಿ (ರಿಲಯನ್ಸ್ ಟೆಕ್ಸ್‌ಟೈಲ್ಸ್. ಬೊಂಬಾಯಿ) | ರೂ 10 ಲಕ್ಷ |
| 6. | ಶ್ರೀ ಬಿ. ಎಂ. ಖೈತಾನ್, ಕಲ್ಕತ್ತ | ರೂ 10 ಲಕ್ಷ |
| 7. | ಶ್ರೀ ಛಬ್ರಿಯಾ ಚಾರಿಟಿ ಟ್ರಸ್ಟ್, ಬೊಂಬಾಯಿ | ರೂ 10 ಲಕ್ಷ |
| 8. | ಶ್ರೀ ರಾಮನಾಥಗೋಯಂಕಾ, ಮದರಾಸು. | ರೂ 10 ಲಕ್ಷ |
| 9. | ಶ್ರೀ ಹೇಮರಾಜ ಪೋದ್ದಾರ್ ಚಾರಿಟಿ ಟ್ರಸ್ಟ್, ಕಲ್ಕತ್ತ | ರೂ 10 ಲಕ್ಷ |

**ಇದುವರೆಗಿನ ಪ್ರತಿಕ್ರಿಯೆ ಅತ್ಯುತ್ತಮ.**

**ಯಾತ್ರಿಕರಿಗೆ ಹೆಚ್ಚಿನ ಸೇವೆ ಸಲ್ಲಿಸಲು ಉದಾರವಾಗಿ ನೀಡಿರಿ.**

ಮಿಕ್ಕ ವಿವರಗಳಿಗೆ ಕೂಡಲೇ ಬರೆಯಿರಿ :

**ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇವಸ್ಥಾನಗಳು, ತಿರುಪತಿ–೫೧೭೫೦೧ ಆಂ.ಪ್ರ.**




ಗೌರವ ಸಂಪಾದಕರು:

ಶ್ರೀ ಸಿ.ಎಚ್. ವೆಂಕಟಪತಿರಾಜು ಐ.ಎ.ಎಸ್.,

ಸಂಪಾದಕ:

ಶ್ರೀ. ಸುಬ್ಬರಾವು, ಎಂ.ಎ.,

ಉಪಸಂಪಾದಕ:

ಪಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ:

ಎಂ. ವಿಜಯಕುಮಾರ್ ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ ದೊರೆಯುವುವು.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**


ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. –ಸಂ॥


ಸಂಪುಟ ೧೮] ಜುಲೈ ೧೯೮೭ [ಸಂಚಿಕೆ ೨


# ವಿಷಯಸೂಚಿ



ಮುಖಚಿತ್ರ: ತಿರುಮಲೆಯ ಆನಿವರ ಆಸ್ಥಾನದಲ್ಲಿ ಪುಷ್ಪಪಲ್ಲಕ್ಕಿ

ಹಿಂಬದಿಯಲ್ಲಿ: ಶ್ರೀನಿವಾಸಮಂಗಾಪುರ ದೇವಾಲಯ

ಒಳಗಡೆ: ದಾಸಸಾಹಿತ್ಯ ಪ್ರಾಜೆಕ್ಟ್‌ನ ಮೆಟ್ಲ ಉತ್ಸವದ ನೋಟಗಳು.

**ಸಪ್ತಗಿರಿಯ ಬಗ್ಗೆ ನಿಮ್ಮ ಅಭಿಪ್ರಾಯಗಳಿಗೆ ಸ್ವಾಗತವಿದೆ**

# ಸಂಪಾದಕೀಯ

ಐಹಿಕವಾದ ಆವಿಷ್ಕರಣಗಳನ್ನೂ, ಆಧ್ಯಾತ್ಮಿಕವಾದ ಔನ್ನತ್ಯಗಳನ್ನೂ ಪ್ರತಿ ಜನಾಂಗದಲ್ಲೂ ಕಾಲದಲ್ಲಿ ಮನುಷ್ಯ ಸಾಧಿಸುತ್ತಲೇ ಬಂದಿರುವುದು ಐತಿಹಾಸಿಕವಾದ ಸತ್ಯವಾದಷ್ಟೇ, ಅವುಗಳನ್ನು ಇತರರಿಗೆ, ತಮ್ಮ ಕಾಲದ ತಮ್ಮ ಸುತ್ತಲಿನವರಿಗೆ ತಲುಪಿಸಿ, ಸರ್ವರೂ ಏಳ್ಗೆಯನ್ನು ಹೊಂದುವ ಹಾದಿಯನ್ನು ಆಯಾಕಾಲದ ಹಿರಿಯರು ಏರ್ಪಡಿಸಿದರು ಎಂಬುದೂ ಐತಿಹಾಸಿಕ ಸತ್ಯ.

ಬರವಣಿಗೆಯಿಲ್ಲದ ಕಾಲದಲ್ಲೂ ಶಿಕ್ಷಣವಿದ್ದಿತು ಎಂದರೆ ಆಶ್ಚರ್ಯವೇನೂ ಇಲ್ಲ. ಬಾಯಿಂದ ಬಾಯಿಗೆ, ತಂದೆಯಿಂದ ಮಗನಿಗೆ ಹರಿದು ಅಖಂಡವಾಗಿ ನಿಂತು ಇಂದೂ ಪ್ರತ್ಯಕ್ಷವಿರುವ ಋಗ್ವೇದವೂ, ಬೆಂಕಿಯ ಬಳಕೆಯೂ ಈ ಅಂಶವನ್ನು ಸ್ಫುಟವಾಗಿ ಸಾರಿಹೇಳುತ್ತವೆ. ಧರ್ಮವೆಂದರೆ ಏನು ಎಂಬುದನ್ನು 'ತೋಳ ಮೇಲಕ್ಕೆತ್ತಿ ಸಾರಿದ' ಮಹರ್ಷಿ ವೇದವ್ಯಾಸರನ್ನು ಮೊದಲ ಗುರು ಎಂದು ಪರಿಗಣಿಸಲಾಗಿದೆ ಎಂದರೆ, ಅವರು ಅಕ್ಷರಕ್ಕೆ ಮೊದಲಿಗನಾರೆಂದು ಲೆಕ್ಕವಿಡದೀಲೋಕದಲ್ಲಿ ಮೊದಲಬಾರಿಗೆ ಲೋಕ ಸಂಗ್ರಹಣ ಕಾರ್ಯದಲ್ಲಿ, ಸುತ್ತಣವರ ಬದುಕನ್ನು ಹಸನುಗೊಳಿಸುವ ಕಾರ್ಯದಲ್ಲಿ, ಆ ಹಿಂದಿನವರಿಗಿಂತ ಹೆಚ್ಚು ಶಾಶ್ವತವಾದ ಕ್ರಮಗಳನ್ನು ಕೈಗೊಂಡರೆಂಬುದೂ, ಹೆಚ್ಚು ರಮಣೀಯವಾಗುವಂತೆ, ಪ್ರಿಯವಾಗುವಂತೆ ಕೆಲಸವನ್ನು ಕೈಗೊಂಡರೆಂಬುದೂ ಕಾರಣಗಳಾಗಬಹುದು.

ಪ್ರಿಯವಾಗುವಂತಹ ರೀತಿಯಲ್ಲಿ ಸತ್ಯವನ್ನು, ಉದ್ಧಾರದ ಮಾರ್ಗವನ್ನು ತಿಳಿಸಿದ್ದು ವ್ಯಾಸರ ಹಿರಿಮೆ. ಎಂತಲೇ ಐದನೇ ವೇದವೆಂದು ಹೆಸರಾದ ಜಯವನ್ನು ಇತಿಹಾಸವೆಂದೂ ಕಾವ್ಯವೆಂಬೂ ಗುರುತಿಸಲಾಗಿದೆ. ಎಂದರೆ ಅದು ಪ್ರಭು, ಮಿತ್ರಸಮ್ಮಿತೆಗಳಾಗುವುದರೊಂದಿಗೆ ಕಾಂತಾಸಮ್ಮಿತವೂ ಆಗಿದೆ. ಕೌರವ ಪಾಂಡವರ ಕುರುಕ್ಷೇತ್ರದಲ್ಲಿ ಒಟ್ಟು ಬಾಳನ್ನು ಧರ್ಮಕ್ಷೇತ್ರ ಮಾಡಿಕೊಳ್ಳುವ ಬಗೆಯನ್ನು ಬಗೆಬಗೆಯಾಗಿ, ಬಹು ಹಸನಾಗಿ, ತಿಳಿಯಾಗಿ, ಆಕರ್ಷಕವಾಗಿ ವಿವರಿಸಿದ್ದು ಅಲ್ಲಿನ ಘನತೆ.

ಗುರುವು ಮಾಡುವುದೂ ಅದನ್ನೇ. ತಂದೆ ತಾಯಂದಿರು ಜೈವಿಕ ಘಟಕವೆಂಬಂತೆ ವ್ಯಕ್ತಿಯ ಬೆಳವಣಿಗೆಗೆ ಕಾರಣವಾಗಬಹುದು. ಆಹಾರ, ಭಯ, ನಿದ್ರೆಗಳಲ್ಲಿ ಜೊತೆಯ ಜೀವಿಗಳು ಜೈವಿಕ ಕ್ರಿಯೆಗಳಲ್ಲಿ–ಮೈಥುನದಲ್ಲಿ–ಮನುಷ್ಯನನ್ನು–ಸಮೃದ್ಧಿಯ ಹಾದಿಯತ್ತ ನಡೆಸಬಹುದು. ಗುರು ಇವರಲ್ಲಿ ಒಬ್ಬನೇ ಆದರೂ ಇವರಿಗಿಂತ ಮೀರಿದ ಆತ್ಮದ ಹಸಿವನ್ನು ಶಮನಗೊಳಿಸಿ, ಮೋಕ್ಷಮಾರ್ಗವನ್ನು ತೋರುತ್ತಾನೆ. ಸಂತೃಪ್ತಿಯ ಮಾರ್ಗವನ್ನು ತೋರುತ್ತಾನೆ.

ಗುರುವೂ ಸುತ್ತಲಿನ ಜಗದಲ್ಲಿ ತನ್ನಂತೆಯೇ ಆದವನೆಂದು ಹೇಳಲೇನೂ ಅಡ್ಡಿಯಿಲ್ಲವಾದರೂ ಇಂತಹವನೇ, ಇಂತಹದ್ದೇ ಎನ್ನಲು ಸಾಧ್ಯವಿಲ್ಲ. ಕಲಿಯಬಲ್ಲವನಿಗೆ ಕಲ್ಲೂ ತಿಳಿಸಬಲ್ಲದು ಎಂಬುದನ್ನು ಒತ್ತಟ್ಟಿಗಿಟ್ಟರೂ, ಊರಿಂಗೆ ದಾರಿಯನು ಆರು ತೋರಿದರೇನು? ಪ್ರಕೃತಿಯಿಂದ ಕಲಿಯುವಷ್ಟನ್ನು ಕಲಿತಾದಮೇಲೆ ಅಥವಾ ಕಲಿಯುತ್ತಿರುವಂತೆ ಒಳನಿರೀಕ್ಷಣೆಯಿಂದ, ಅಂತರಂಗ ವಿಶ್ಲೇಷಣೆಯಿಂದ ಕಲಿಯಬಹುದಾದದ್ದು ಕಡಮೆಯಲ್ಲ ಅಥವಾ, ಅದೇ ಮುಖ್ಯವೆಂದರೂ ನಡೆದೀತು. ಈ ಒಳನಿರೀಕ್ಷಣೆಗೆ ಅಂತರಂಗ ವಿಶ್ಲೇಷಣೆಗೆ ಅನುವಾಗುವುದು ಗುರುವಿನ ಮಾತು, ಗುರುವಿನ ಸಾಹಚರ್ಯ. ನೂರಾರು ಮತ ಲೋಕದುಗ್ರಾಣದಲ್ಲಿದ್ದರೂ, ತನಗೊಪ್ಪುವ ಮತವನ್ನು ಆಯ್ಕೆ ಮಾಡಿಕೊಳ್ಳುವಾಗ ಮನುಷ್ಯನಿಗೆ ಬೇಕಾದದ್ದು ಸದಸದ್ವಿವೇಕ. ಅದು ಉಂಟಾಗಲು ಮುಖ್ಯ ಕಾರಕ ಗುರು. ಎಂತಲೇ ದಾಸರು ಹೇಳಿದ್ದು–ಗುರುವಿನ ಗುಲಾಮನಾಗದನಕ ದೊರಕದಣ್ಣ ಮುಕುತಿ. ಹಾಗೆಂದೇ ಆಚಾರ್ಯನನ್ನು ದೇವರ ಬಳಿಯೇ–ಜೊತೆಯಲ್ಲಿಯೇ ಗಣಿಸಿದರು–ಆಚಾರ್ಯದೇವೋಭವ.

"ಗುರುಃ ಸಾಕ್ಷಾತ್ ಪರಂಬ್ರಹ್ಮ ತಸ್ಮೈ ಶ್ರೀ ಗುರವೇ ನಮಃ"

# ಶ್ರೀರಾಮಾನುಜಾಚಾರ್ಯರ ಧರ್ಮದೃಷ್ಟಿ

ಪ್ರಪಂಚದಲ್ಲಿ ಅನೇಕ ದಾರ್ಶನಿಕರು, ಅನೇಕ ಆಚಾರ್ಯಪುರುಷರು, ಅನೇಕ ಮತ ಪ್ರತಿಪಾದಕಸ್ವಾಮಿಗಳು, ಯತಿಗಳು, ಆಗಿ ಹೋಗಿದ್ದಾರೆ. ಅವರ ಪರಂಪರೆಯಲ್ಲಿ ಇನ್ನೂ ಮತಮಾನ್ಯಗಳು ಉಳಿದು ಬಂದಿವೆ. ಸಾಮಾನ್ಯವಾಗಿ ಈ ಹರಹಿನಲ್ಲಿ ಬರುವವರೆಲ್ಲ, ಲೋಕ ಕಲ್ಯಾಣಾರ್ಥವಾಗಿ ತಮ್ಮ ತಪಸ್ಸಿನ ಫಲವನ್ನು ಶ್ರೀ ಸಾಮಾನ್ಯರಲ್ಲಿ ಹಂಚಿಕೊಡಬೇಕಾದುದು ಧರ್ಮವೆಂದು ನಂಬಿದವರು. ನಿಜವಾಗಿ ನೋಡಿದರೆ, ಶ್ರೀ ಸಾಮಾನ್ಯರಲ್ಲಿ ಯಾವ ಬಗೆಯ ಮೇಲು-ಕೀಳಿಲ್ಲದೆ, ಅವನು ಸದ್ಧರ್ಮಕ್ರಿಯಾಶೀಲನಾಗಿದ್ದರೆ, ಅವನು ಯಾವ ಜಾತಿಯವನೇ ಆಗಿರಲಿ, ಹೆಣ್ಣೇ ಇರಲಿ, ಗಂಡೇ ಇರಲಿ— ಆ ವ್ಯಕ್ತಿಗೆ ಮೋಕ್ಷ ಮಾರ್ಗವನ್ನು ತಿಳಿಸಿಕೊಡುವುದು ಎಲ್ಲ ದಾರ್ಶನಿಕರ, ಯೋಗಿಗಳ, ಸ್ವಾಮಿಗಳ, ಮತ ಪ್ರತಿಪಾದಕರ ಆದ್ಯಕರ್ತವ್ಯ. ಅಂತಹರ ದೃಷ್ಟಿಯಲ್ಲಿ ಸಮಾನತೆಯು ದೃಢಪಟ್ಟಿರಬೇಕು; ಹುಟ್ಟು ಆಕಸ್ಮಿಕ. ಹುಟ್ಟಿನಿಂದ ಅವನ ಯೋಗ್ಯತೆಯನ್ನು ಅಳೆಯುವುದು ಸರಿಯಲ್ಲ. ಯೋಗ್ಯತೆಯನ್ನು ಅವನ ವಿವೇಕ ಬಲ ಸಾಧನಾಬಲಗಳಿಂದ ಅಳೆಯಬೇಕೆಂದೂ, ಆ ಪ್ರಕಾರ ಗೌರವ ಕೊಡಬೇಕೆಂದೂ ಅವರಲ್ಲಿ ನಿಶ್ಚಿತವಾಗಿರಬೇಕು.

ಈ ಹಿನ್ನೆಲೆಯಲ್ಲಿ ಭರತಖಂಡದ ಶ್ರೇಷ್ಠ ಆಚಾರ್ಯರಲ್ಲಿ ಶ್ರೀ ರಾಮಾನುಜಾಚಾರ್ಯರು ಅಗ್ರಪಂಕ್ತಿಯಲ್ಲಿ ಬರುತ್ತಾರೆ. ಅವರು ಹನ್ನೊಂದನೆಯ ಶತಮಾನದಲ್ಲಿ ಬಾಳಿ ಬೆಳಗಿದವರು. ಅವರು ಯಾದವ ಪ್ರಕಾಶರ ನೆಚ್ಚಿನ ಶಿಷ್ಯರಾಗಿ ಗುರುವಿನ ಅನುಗ್ರಹವನ್ನು ಪಡೆದುಕೊಂಡರಲ್ಲದೆ, ತಿರುಕೋಟ್ಟಿಯೂರ್ ನಂಬಿಯಾರರಿಂದ ಹದಿನೆಂಟು ಚೆನ್ನುಡಿಗಳ ರಹಸ್ಯವನ್ನು ತಿಳಿದುಕೊಂಡರು, ವೇದಾಂತದ ಪ್ರಮುಖ ಪ್ರಕಾರಗಳಲ್ಲಿ ಒಂದಾದ ವಿಶಿಷ್ಟಾದ್ವೈತಕ್ಕೆ ಆಚಾರ್ಯರಾದರು. ಈ ವಿಶಿಷ್ಟಾದ್ವೈತವನ್ನೇ ಶ್ರೀ ವೈಷ್ಣವ ಮತವೆಂದೂ ಕರೆಯುತ್ತಾರೆ. ಇಲ್ಲಿ ಸಗುಣಬ್ರಹ್ಮ, ಪರಿಣಾಮವಾದ, ಭಕ್ತಿಯೋಗ ಮತ್ತು ವಿದೇಹ ಮುಕ್ತಿ—ಇವುಗಳನ್ನು ಪ್ರತಿಪಾದಿಸಲಾಗಿದೆ. ಐಹಿಕ ಜಗತ್ತು ಸತ್ಯ ಭಗವಲ್ಲೋಕವೂ ಸತ್ಯ. ಸತ್ಯಭೂತರಾದ ಜೀವರು ಭಗವಂತನನ್ನು ಸೇರಿ ಯಾವ-ದಾತ್ಮ ಭಾವಿಯಾದ ಬ್ರಹ್ಮಾನುಭವವನ್ನು ಮಾಡುವುದೂ ಸತ್ಯ. ಅನಾದಿಯಾದ ಕರ್ಮದ ಕಾರಣ ಬಂದ ಸಂಸಾರಬಂಧನವನ್ನು ಕಿತ್ತೊಗೆಯುವ ಅವಕಾಶ ಎಲ್ಲ ಜೀವಿಗಳಿಗೂ ಇದೆ. ವಿವೇಕವನ್ನು ಪಡೆದುಕೊಂಡು ಸಾಧನೆಗಳನ್ನನುಷ್ಠಿಸಿ ಮೇಲು-ಕೀಳೆಂಬ ಭಾವವಿಲ್ಲದೆ, ಯಾರುಬೇಕಾದರೂ ಆತ್ಮೋನ್ನತಿಯನ್ನು ಸಾಧಿಸಬಹುದೆಂಬುದೇ ಈ ದರ್ಶನದ ಉಪದೇಶ.

ಅಂತೆಯೇ ರಾಮಾನುಜಾಚಾರ್ಯರು ತಮ್ಮ ದರ್ಶನದ ಬೆಳಕಿನಲ್ಲಿ ಜಗತ್ತಿನ ಮಕ್ಕಳೆಲ್ಲ ದೇವರ ಮಕ್ಕಳೆಂದೇ ಭಾವಿಸಿ ಎಲ್ಲರ ಒಳಿತಿಗಾಗಿ ಹಾರೈಸಿದರು. ತಿರುಕೋಟ್ಟಿಯೂರ್ ನಂಬಿಯಾರರಿಂದ ಪಡೆದ ಹದಿನೆಂಟು ಚೆನ್ನುಡಿಗಳ ರಹಸ್ಯವನ್ನು ಬೇರೆ ಯಾರಿಗಾದರೂ ತಿಳಿಸಿದರೆ ರಾಮಾನುಜರಿಗೆ ನರಕಪ್ರಾಪ್ತಿ ಎಂದು ಗುರು ಹಾಕಿದ ಕಟ್ಟಳೆಯನ್ನು ದೂರ ಸರಿಸಿ, 'ಹೋದರೆ ತಾವೊಬ್ಬರೇ ನರಕಕ್ಕೆ ಹೋದರಾಯಿತು ; ಉಳಿದ ಜನ ಸಾಮಾನ್ಯರಿಗೆಲ್ಲ ಮುಕ್ತಿ ಲಭಿಸಲೆಂದು' ಯೋಚಿಸಿ, ಚೆನ್ನುಡಿಗಳಲ್ಲಿಯ ಜೀವನ ರಹಸ್ಯವನ್ನೆಲ್ಲ ಎಲ್ಲರಿಗೂ ತಿಳಿಸಿದರು. ಮತ್ತೆ, ತಾವು ಹೋದೆಡೆಗಳಲ್ಲೆಲ್ಲ ದೇವಾಲಯಗಳನ್ನು ಕಟ್ಟಿಸಿ, ಶಿಥಿಲವಾಗಿದ್ದ ದೇವಾಲಯಗಳನ್ನು ಜೀರ್ಣೋದ್ಧಾರ ಮಾಡಿ, ಅಲ್ಲಿ ಬ್ರಹ್ಮೋತ್ಸವದಲ್ಲಿ ಹರಿಜನ ಗಿರಿಜನರಿಗೆ ಭಗವಂತನ ದರ್ಶನಕ್ಕೆ ಮುಕ್ತ ಅವಕಾಶಮಾಡಿ ಕೊಟ್ಟರು. ಅಷ್ಟೇ ಅಲ್ಲದೆ, ಅವರಲ್ಲಿಯ ಉತ್ತಮರನ್ನು ಆಯ್ದು ಅಲ್ಲಿಯ ಕಾರ್ಯಕರ್ತರನ್ನಾಗಿ ನೇಮಿಸಿದರು. ಮಹಿಳೆಯರ ಬಗೆಗಂತೂ ಆಚಾರ್ಯರು ಅಪಾರ ಕರುಣೆಯನ್ನು ತೋರಿ ಅವರಿಗೆ ಚೆನ್ನಾಗಿ ಬದುಕಲು - ಬಾಳಲು ಅವಕಾಶಮಾಡಿ ಕೊಟ್ಟರು. ಕನಕಾಂಗಿಯಲ್ಲಿ ತ್ಯಾಗಗುಣವನ್ನು ಮೆಚ್ಚಿ ಮೋಕ್ಷಕ್ಕೆ ದಾರಿ ಮಾಡಿ ಕೊಟ್ಟ ಘಟನೆ; ಆಚಾರ್ಯರಿಗೆ ಮೊಸರು ಕೊಟ್ಟ ತೆಂಡಿಯೂರಕೊಂಡಿ ಎನ್ನುವವಳಿಗೋಸ್ಕರ ಶ್ರೀ ವೆಂಕಟೇಶನಿಗೆ ಪತ್ರಕೊಟ್ಟು ಮೋಕ್ಷಕೊಡಿಸಿದ ಸಂದರ್ಭ; ತಿರುವಾಲಿ ತಿರುನಗರಿಯಲ್ಲಿ ದಲಿತ ಸ್ತ್ರೀಯ ವಿವೇಕವನ್ನು ಮೆಚ್ಚಿ ಅವಳಿಗೆ ದೀಕ್ಷೆ ನೀಡಿದ ಸನ್ನಿವೇಶ, ಚಿದಂಬರದ ವಾರಾಂಗನೆ ಕುಮುದಿನಿಯ ಪುತ್ರಿ ತಿಲ್ಲಾ ವೈರಾಗ್ಯನಿಧಿಯಾಗಿ, ಪರಮಾತ್ಮನನ್ನೇ ಮಧುರ ಭಕ್ತಿಯಿಂದ ವರಿಸುವ ಭಾಗ್ಯವನ್ನು ಒದಗಿಸಿ ಕೊಟ್ಟದ್ದು— ಇವೆಲ್ಲ ಘಟನೆಗಳು ಕೆಲವರಿಗೆ ಪವಾಡವೆನಿಸಬಹುದು. ಆದರೆ ಅವುಗಳ ಹಿಂದೆ ಮಾನವಕಲ್ಯಾಣದ ದರ್ಶನವಿದೆಯೆಂಬುದನ್ನು ಎಂದಿಗೂ ಮರೆಯುವ ಹಾಗಿಲ್ಲ. ಆಚಾರ್ಯರು ತಮ್ಮ ಜೀವಮಾನದಲ್ಲಿ ಇಂತಹ ಅದ್ಭುತ ಕಾರ್ಯಗಳನ್ನು ಮಾಡಿ, ಮೇಲು ಕೀಳನ್ನು ಹೊಡೆ-ದೋಡಿಸಲು ಹೆಣಗಾಡಿ, ಮಹಾತ್ಮಾ ಬಸವಣ್ಣನವರು, ಮಹಾತ್ಮಾ ಗಾಂಧೀಜಿಯವರಿಗಿಂತ ಮೊದಲೇ ಸಂಪ್ರದಾಯಸ್ಥ ಮತದಲ್ಲಿ ಹುಟ್ಟಿದ್ದರೂ ಜಾತಿಗುಣ ಕರ್ಮ ಕರ್ಮಗಳ ಭೇದವಿಲ್ಲದೆ ಎಲ್ಲ ಮಾನವರೂ ಆತ್ಮೋನ್ನತಿಯನ್ನು ಸಾಧಿಸಬಹುದೆಂದು ಸಾರಿ ಬಾಳಿದರು—ಜಗತ್ತನ್ನು ಬಾಳಿಸಿದರು.

ಇಂತಹ ಆಚಾರ್ಯರು ಕಾಲಕಾಲಕ್ಕೆ ಹುಟ್ಟುತ್ತಿದ್ದರೆ, ಪ್ರಪಂಚವು ಹಸನಾಗಿ ಉಳಿಯುತ್ತದೆ. ಇಂತಹ ಆಚಾರ್ಯರ ಆದರ್ಶದ ಬಾಳು ತ್ರಿಕಾಲಗಳಲ್ಲಿಯೂ ಪ್ರೇರಣಾತ್ಮಕ, ದಾರಿದೀಪ

ಯೋ ನಿತ್ಯಮಚ್ಯುತ ಪದಾಂಬುಜ
ಯುಗ್ಮ ರುಕ್ಮ-
ವ್ಯಾಮೋಹತಃ ತದಿತರಾಣಿ
ತೃಣಾಯ ಮೇನೇ ।
ಅಸ್ಮದ್ಗುರೋರ್ಭಗವತೋಽಸ್ಯ
ದಯೈಕ ಸಿಂಧೋಃ
ರಾಮಾನುಜಸ್ಯ ಚರಣೌ
ಶರಣಂ ಪ್ರಪದ್ಯೇ ॥

ಎಂದು ಅವರನ್ನು ಶ್ರದ್ಧಾಪೂರ್ವಕ ನಂಬಿದರೆ ಮಾನವ ಜನ್ಮ ಸಾರ್ಥಕ. •

ಪ್ರೊ॥ ವಸಂತಕುಷ್ಟಗಿ

# ಕಲಶ

ಮಂಗಲ ಕಾರ್ಯದಲ್ಲೆಲ್ಲ ಕಲಶದ ಮಹತ್ವವಿದೆ. ವಿವಾಹ ಸಂದರ್ಭದಲ್ಲಂತೂ ವಾದ್ಯವೈಭವಗಳೊಂದಿಗೆ ಕಲಶ ಧರಿಸಿದವರು ಮುಂದಿರುತ್ತಾರೆ. ಮಂಗಲ ಕಾರ್ಯದಲ್ಲಿ ಕಲಶ ಹಿಡಿದ ತರುಣಿಯನ್ನು "ಕಳಸಗಿತ್ತಿ" ಎಂದು ಕರೆಯುವ ರೂಢಿ ಇದೆ. ಇದು ಕೇವಲ ವಿವಾಹಾದಿ ಮಂಗಲ ಕಾರ್ಯದಲ್ಲಿ ಮಾತ್ರ ಎಂದೇನೂ ಅಲ್ಲ. ಯಜ್ಞ ಯಾಗ, ಪುಣ್ಯಾಹವಾಚನದ ಕಾಲದಲ್ಲಿಯೂ ಮೊದಲು ಈ ಕಲಶದಪೂಜೆ, ಅನಂತರದಲ್ಲಿಯೇ ಇನ್ನುಳಿದ ಕಾರ್ಯ. ಪ್ರತಿದಿನ ಮಾಡುವ ದೇವಪೂಜೆಯ ಕಾಲದಲ್ಲಿ ಬಳಸುವ ಶುದ್ಧೋದಕವನ್ನು ಬಳಸುವ ಕಾಲದಲ್ಲಿ ಕಲಶರೂಪದಲ್ಲಿರುವ ಈ ಪಾತ್ರೆಯಲ್ಲಿ ಸಕಲ ನದಿಗಳನ್ನು ಆಹ್ವಾನಿಸುವುದುಂಟು.

ಕಲಶ–ಇದು ಭಾರತೀಯ ಸಂಸ್ಕೃತಿಯಲ್ಲಿ ಅಗ್ರಮಾನ್ಯ ಪೂಜೆಗೊಳ್ಳುವ ದೇವತೆ. ಪುಣ್ಯಾಹವಾಚನಾನಂತರದಲ್ಲಿ ಪತಿ ಪತ್ನಿಯರಿಗೂ ಹಾಗೂ ಪರಿವಾರವರ್ಗದವರಿಗೂ ಈ ಕಲಶದಲ್ಲಿರಿಸಲಾದ ಜಲವನ್ನು ಮಂತ್ರ ಪುರಸ್ಸರವಾಗಿ ಪ್ರೋಕ್ಷಣೆಮಾಡಿ ಎಲ್ಲರನ್ನೂ ಪವಿತ್ರರನ್ನಾಗಿ ಮಾಡುವುದುಂಟು.

ಈ ಕಲಶ ಸ್ಥಾಪನಾಕಾರ್ಯದಲ್ಲಿ ಕೆಲವು ವಿಧಾನಗಳಿವೆ. ನಾನಾತರಹದ ರಂಗವಲ್ಲಿಯನ್ನು ಬಿಡಿಸಿ ಅದರಮೇಲೆ ಮಣೆಯನ್ನಿಟ್ಟು ಮೇಲೆ ಅಕ್ಕಿಯನ್ನೊ ಅಥವಾ ಗೋಧಿಯನ್ನೊ ಚೌಕೋನಾಕೃತಿಯಲ್ಲಿ ಹಂಡಿ ಅವರಲ್ಲಿ ಸ್ವಸ್ತಿಕ ಚಿಹ್ನೆಯನ್ನು ಬಿಡಿಸುತ್ತಾರೆ. ಕಲಶ ಪಾತ್ರೆಗಳಿಗೆಲ್ಲ ಗಂಧ ಅಕ್ಷತೆಗಳನ್ನು ಲೇಪಿಸಿ ಮಾವಿನ ಎಲೆಗಳಿಂದ ಪೂರ್ಣ ತೆಂಗಿನಕಾಯಿಯನ್ನಿಟ್ಟು ಹೂವಿನಮಾಲೆ ಮುಡಿಸುತ್ತಾರೆ. ವಸ್ತ್ರವನ್ನು ಹೊದಿಸುತ್ತಾರೆ. ಅರಿಶಿಣಕುಂಕುಮದೊಂದಿಗೆ ಸಮಯಾನುಸಾರವಾಗಿ ಧೂಪದೀಪಗಳಿಂದ ಪೂಜಿಸುತ್ತಾರೆ. ಹೀಗ ಕಲಶಕ್ಕೆ ಷೋಡಶೋಪಚಾರ ಪೂಜಾದಿಗಳಾಗಬೇಕಾಗುತ್ತದೆ.

ಕಲಶದಲ್ಲಿ ಅಧಿಷ್ಠಾತ್ರಿಯಾದ ದೇವತೆ ವರುಣ. ಈತ ವಿಶ್ವದ ಅತ್ಯದ್ಭುತ ವ್ಯಾಪಾರಗಳನ್ನು ಮಾಡುವವ. ಈತನು ಉತ್ಕೃಷ್ಟ ರೂಪವಾದ ರಸವನ್ನೀಯುವವನು. ಈ ಕಲಶದೇವನನ್ನು ಆಹ್ವಾನಿಸುವ ಮಂತ್ರವಿದೆ.

ಹೇ! ವರುಣದೇವನೇ ನಿನಗೆ ವಂದನೆ ಸಲ್ಲಿಸುವೆ. ನಿನ್ನ ಸಾಮಿಪ್ಯವನ್ನಪೇಕ್ಷಿಸುವೆ ಯಾಗವನ್ನಾಚರಿಸಲಿರುವ ನಾನು ನಿನಗೆ ಹವಿಸ್ಸನ್ನರ್ಪಿಸಿ ನಿನ್ನಿಂದ ಅನುಗ್ರಹವನ್ನು ಯಾಚಿಸುವೆ. ದೇವನೇ ಸದಾಕಾಲವೂ ನೀನು ನಮ್ಮ ಮಧ್ಯದಲ್ಲಿ ವಾಸವಾಗಿರು. ನಮ್ಮ ಆಯುಷ್ಯವನ್ನು ಅಭಿವೃದ್ಧಿಗೊಳಿಸುವವನಾಗು. ನಿನ್ನ ಕೀರ್ತಿಯು ದಶ ದಿಕ್ಕುಗಳಿಗೆ ವ್ಯಾಪಿಸುವಂತಾಗಲಿ. ಎಂಬರ್ಥದ ಮಂತ್ರವಿದು.

ಮಂಟಪದಲ್ಲಿ ಅಥವಾ ಮಣೆಯಮೇಲೆ ಪ್ರತಿಷ್ಠಾಪಿಸಲಾದ ಕಲಶ ದೇವತೆಯನ್ನು ವರ್ಣಿಸುವ ಮಂತ್ರಗಳೂ ಕೂಡ ಬಹು ಅರ್ಥ ಗರ್ಭಿತವಾದವುಗಳು.

ಕಲಶಸ್ಯ ಮುಖೇ ವಿಷ್ಣುಃ
ಕಂಠೇ ರುದ್ರಃ ಸಮಾಶ್ರಿತಃ
ಮೂಲೇ ತತ್ರ ಸ್ಥಿತೋ ಬ್ರಹ್ಮಾ
ಮಧ್ಯೇ ಮಾತೃಗಣಾಃ ಸ್ಮೃತಾಃ
ಕುಕ್ಷೌತು ಸಾಗರಾಃ ಸರ್ವೇ
ಸಪ್ತದ್ವೀಪಾ ವಸುಂಧರಾ
ಋಗ್ವೇದೋಽಥ ಯಜುರ್ವೇದ
ಸಾಮವೇದೋ ಹ್ಯಥರ್ವಣಃ
ಅಂಗೈಶ್ಚ ಸಹಿತಾಃ ಸರ್ವೇ
ಕಲಶಂತು ಸಮಾಶ್ರಿತಾಃ
ಅತ್ರ ಗಾಯತ್ರಿ ಸಾವಿತ್ರಿ ಸರಸ್ವತಿ
ಶಾಂತಿ ಪುಷ್ಟಿಕರೀ ತಥಾ
ಆಯಾಂತು ಮಮ ಶಾಂತ್ಯರ್ಥಂ
ದುಂತ ಕ್ಷಯ ಕಾರಕಾಃ
ಸರ್ವೇ ಸಮುದ್ರಾಃ ಸರಿತಃ
ತೀರ್ಥಾನಿ ಜಲದಾ ನದಾಃ
ಆಯಾಂತು ಮಮ ಶಾಂತ್ಯರ್ಥಂ
ದುರಿತಕ್ಷಯ ಕಾರಕಾಃ

ಈ ಮಂತ್ರವು ಸಂಸ್ಕೃತ ಜನ್ಯವೆನಿಸಿದ
ಇಲ್ಲಿ ಬಳಸಲಾದ ಪದಗಳು ಸ
ಸರ್ವರಿಗೂ ಅರ್ಥವಾಗುತ್ತವೆ. ಇ
ಪಂಡಿತೋತ್ತಮರು ಆಧ್ಯಾತ್ಮ ಪರ
ನಾನಾವಿಧವಾದ ಅನೇಕ ರೀತಿಯ ಅ
ವನ್ನೊದಗಿಸುತ್ತಾರೆ.

ಕಲಶದ ಮುಖದಲ್ಲಿ ವಿಷ್ಣು, ಕಂಠ
ರುದ್ರ, ಮೂಲದಲ್ಲಿ ಬ್ರಹ್ಮ. ಮಧ್ಯ
ದಲ್ಲಿ ಮಾತೃದೇವತೆಗಳು, ಹೆಕ್ಕೆಯಲ್ಲಿ
ಸಾಗರಗಳು, ಸಪ್ತದ್ವೀಪಗಳಿಂದ ಕೂ
ವಸುಂಧರೆಯೂ ಅಂಗಾಂಗಗಳಲ್ಲಿ ಋ
ಯಜುರ್, ಸಾಮ, ಅಥರ್ವಣ ವೇದಾದಿಗ
ಗಾಯತ್ರಿ, ಸಾವಿತ್ರಿ, ಸರಸ್ವತಿದೇವಿಯ
ವಾಸವಾಗಿದ್ದು, ಸಪ್ತಸಾಗರಗಳಿಂದ
ನದಿಗಳಿಂದ ಕೂಡಿದ ಕಲಶಾಭಿವ
ದೇವತೆಯೇ ನಮ್ಮನ್ನು ಪವಿತ್ರರನ
ಮಾಡು. ಈ ಕಲಶದ ಜಲವನ್ನೇ ಪ
ಸ್ಯಂತುಹಾಶಿಷಃ ಸಂತು. ಬ್ರಾಹ್ಮಣ
ಸತ್ಯವಾದವುಗಳು ಎಂದರ್ಥ.

ಕಲಶದಲ್ಲಿ ಥಾಲಿಗಳನ್ನು ಬಳಸ
ದುಂಟು. ಅಥವಾ ಚಿಕ್ಕ ತಂಬಿಗೆಗಳ
ಸುವುದುಂಟು. ಇಂಥ ಕಲಶಗಳನ್ನು
ಯೊಂದು ಶಾಂತಿ ಪೂಜಾದಿಗಳಲ್ಲಿ ಬಳಸ
ದುಂಟು. ಇನ್ನು ಕೆಲವು ಪ್ರಾಂತಗ
ಕೊಡವನ್ನೇ ಕಲಶವಾಗಿ ಪೂಜಿಸ
ದುಂಟು. ಅಂಥದನ್ನು ಘಟ ಕ
ವೆಂದೆನ್ನುತ್ತಾರೆ. ಯಾವ ದೇವಮಂ
ವನ್ನೇ ನಿರ್ಮಿಸಲಿ. ಆ ದೇವಾಲಯ
ಮಧ್ಯಭಾಗದ ಗೋಪುರದಲ್ಲಿಯೂ ಕ
ವಿರುತ್ತದೆ. ಅದನ್ನು ಗೋಪುರ ಕ
ವೆಂದೆನ್ನುತ್ತಾರೆ. ಕೆಲವು ಪ್ರಾಂತಗ
ಕೊಡಗಳ ಮೇಲೆ ದೀಪವನ್ನಿಟ್ಟು
ಸುತ್ತಾರೆ. ಅದನ್ನು ಜ್ಯೋತಿರ್ಕ
ವೆಂದು ಸಂಬೋಧಿಸುತ್ತಾರೆ.

ಕಲಶ ಪೂಜೆ ಇದು ಭಾರತೀ
ಸಂಸ್ಕೃತಿಯ ದಿವ್ಯ ಪ್ರತೀಕ. ಇದರ ರ
ವನ್ನರಿತು ಪೂಜಿಸುವುದರಿಂದ
ಪುರುಷಾರ್ಥವನ್ನು ಹೊಂದಬಹುದಾಗಿ

**ಶ್ರೀ ಆದ್ಯರಾಮಾಚಾರ್ಯ**

# ವೇದಕಾಲೀನ ಋಷಿಗಳು

"ಋಷಯೋ ಅಂತಃಪ್ರಕಾಶಾಃ"- ಎಂತ ರಂಗದಲ್ಲಿ ಆತ್ಮದ ಬೆಳಕನ್ನು ಕಂಡವರೇ ಋಷಿಗಳು, ಎಂದ. ಉಪನಿಷತ್ತುಗಳಲ್ಲಿ ಋಷಿ ಶಬ್ದವನ್ನು ನಿರ್ವಚನಗೈದಿದ್ದಾರೆ.

ಹರಿವಂಶಾದಿ ಪುರಾಣಗಳಲ್ಲಿ ಋಷಿಗಳ ಲಕ್ಷಣವನ್ನು ತುಸು ಪರಿಷ್ಕಾರವಾಗಿಯೇ ಹೇಳಿದ್ದು ಕಂಡು ಬರುತ್ತದೆ.

ದೀರ್ಘಾಯುಷೋ ಮಂತ್ರಕೃತ
ಈಶ್ವರಾ ದೀರ್ಘ ಚಕ್ಷುಷಃ ।
ಬುದ್ಧ್ಯಾ ಪ್ರತ್ಯಕ್ಷಧರ್ಮಾಣೋ
ಗೋತ್ರ ಪ್ರಾವರ್ತಕಾಸ್ತಥಾ ॥

ದೀರ್ಘಾಯುಷಿಗಳೂ, ದಿವ್ಯದೃಷ್ಟಿಯುಳ್ಳವರೂ ಮತ್ತು ತಮ್ಮ ಬುದ್ಧಿಶಕ್ತಿಯಿಂದ ಧರ್ಮಾಧರ್ಮಗಳ ಫಲಾಫಲಗಳನ್ನು ಪ್ರತ್ಯಕ್ಷವಾಗಿ ನೋಡಿದವರೂ ಆಗಿ ದಿವ್ಯ ಮಂತ್ರಗಳನ್ನು ಮೊದಲಿಗೆ ಕಂಡು ಹಿಡಿದ ಗೋತ್ರಪ್ರವರ್ತಕರಾದ ಮಹಾತ್ಮರೇ ಋಷಿಗಳು- ಎಂದು ಹೇಳಿದ್ದಾರೆ.

ನಾವು ಈಗ ವೇದಪುರಾಣಗಳಲ್ಲಿ ಕಾಣುವ ವಶಿಷ್ಠ, ವಾಮದೇವ, ವಿಶ್ವಾಮಿತ್ರ ಮುಂತಾದ ಋಷಿಪುಂಗವರಲ್ಲಿ ಈ ಎಲ್ಲ ಲಕ್ಷಣಗಳನ್ನು ಕಾಣಬಹುದಾಗಿದೆ.

ಆದರೆ ವೇದಗಳ ಅಧಿಕೃತವಾದ ಆದ್ಯ ಅನುಕ್ರಮಣಿಕಾಕಾರನಾದ ಕಾತ್ಯಾಯನನು ಮಾತ್ರ ಪುರಾಣೋಕ್ತ ಲಕ್ಷಣದ ಎಲ್ಲ ದಳಗಳನ್ನು ಬಿಟ್ಟು 'ಮಂತ್ರದ್ರಷ್ಟೃತ್ವ'ವೇ ಋಷಿಯ ಮುಖ್ಯ ಲಕ್ಷಣ ಎಂದು ನಿರೂಪಿಸಿದ್ದು ಕಂಡುಬರುತ್ತದೆ.

ವಾಯುಪುರಾಣದಲ್ಲಿ ಬರುವ ಋಷಿ ಲಕ್ಷಣ ವಿಧಾಯಕವಾದ ವಚನವೂ ಕಾತ್ಯಾಯನನ ಈ ಅಭಿಪ್ರಾಯವನ್ನೇ ಪುಷ್ಟೀಕರಿಸುತ್ತದೆ.

ಋಷೀಣಾಂ ತಪ್ಯತಾಮುಗ್ರಂ
ತಪಃ ಪರಮದುಷ್ಕರಂ ।
ಮಂತ್ರಾಃ ಪ್ರಾದುರ್ಬಭೂವುರ್ಹಿ
ಪೂರ್ವ ಮನ್ವಂತರೇಷ್ವಿಹ ॥

"ಹಿಂದಿನ ಮನ್ವಂತರಗಳಲ್ಲಿ ಅತ್ಯಂತ ಉಗ್ರವೂ ದುಷ್ಕರವೂ ಆದ ಕಠಿಣ ತಪಸ್ಸನ್ನಾಚರಿಸುವ ಋಷಿಗಳಿಂದ ಮಂತ್ರಗಳು ಪ್ರಾದುರ್ಭೂತವಾದವು" ಎಂದು ಮಂತ್ರಗಳ ಆವಿಷ್ಕಾರದ ಬಗೆಯನ್ನು ಒಣ್ಣಿಸಿದ್ದಾರೆ.

ಕಾತ್ಯಾಯನನು ಸರ್ವಾನುಕ್ರಮಣಿಕೆಯಲ್ಲಿ—

ಯಸ್ಯ ವಾಕ್ಯಂ ಸ ಋಷಿಃ ।
ಯಾತೇನೋಚ್ಯತೇ ಸಾ ದೇವತಾ ॥

ಎಂದು ಹೇಳಿದ ಮಾತನ್ನೇ ಸಾಯಣಾಚಾರ್ಯರು ಇನ್ನಷ್ಟು ವಿಶದವಾಗಿ—

ಅತೀಂದ್ರಿಯಸ್ಯ ವೇದಸ್ಯ
ಪರಮೇಶ್ವರಾನುಗ್ರಹೇಣ
ಪ್ರಥಮತೋ ದರ್ಶನಾತ್ ಋಷಿತ್ವಂ ॥

ಅತೀಂದ್ರಿಯವಾದ ವೇದಮಂತ್ರಗಳನ್ನು ಭಗವಂತನ ಅನುಗ್ರಹದಿಂದ ಮೊಟ್ಟ ಮೊದಲು ಕಂಡುಹಿಡಿಯುವ ಮಹಾಮಹಿಮೆಯೇ ಋಷಿತ್ವ ಎಂದು ವಿವರಿಸಿದ್ದಾರೆ.

ಈ ಋಷಿಲಕ್ಷಣವನ್ನು ಶ್ರೀಮದಾನಂದತೀರ್ಥ ಭಗವತ್ಪಾದರು ಇನ್ನೂ ಹಿಗ್ಗಿಸಿ ಅನ್ಯೂನಾನತಿಪ್ರಸಕ್ತವಾಗುವಂತೆ

ಯಃ ಪಶ್ಯತಿ ಸ್ವಯಂ ವಾಕ್ಯಂ
ಸ ಋಷಿಸ್ತಸ್ಯ ಕೀರ್ತಿತಃ ॥
(ಮಧ್ವಾಚಾರ್ಯರ ವೇದಭಾಷ್ಯ)

ಆಚಾರ್ಯರ ಅಭಿಪ್ರಾಯವನ್ನು ಅವರ ಎಲ್ಲ ಗ್ರಂಥಗಳ ಮುಖ್ಯ ಟೀಕಾಕಾರರಾದ ಜಯತೀರ್ಥರು ಈ ರೀತಿ ವಿವರಿಸಿದ್ದಾರೆ.

ಯಥಾ ಯಃ ಸ್ವಯಮಧ್ಯಯನೇನ
ವಿನೈವ ಯದ್ವಾಕ್ಯಂ ಪಶ್ಯತಿ
ಸ ತಸ್ಯ ವಾಕ್ಯಸ್ಯ ಋಷಿಃ
ಪ್ರಕೀರ್ತಿತಃ ॥

ಅಧ್ಯಯನಮಾಡದೇ ಕೇವಲ ತಪಶ್ಶಕ್ತಿಯಿಂದ. ತಪಸ್ಸುಷ್ಟನಾದ ಪರಮೇಶ್ವರನ ಅನುಗ್ರಹದಿಂದ ಯಾರಿಗೆ ಮಂತ್ರಗಳು ಸ್ವಯಂಪ್ರತಿಭಾತವಾಗುತ್ತವೆಯೋ ಅವರೇ ಋಷಿಗಳು.

ಮಧ್ವಾಚಾರ್ಯರ ಅಭಿಪ್ರಾಯದ ಪ್ರಕಾರ ಮಂತ್ರವನ್ನು ಮೊದಲು ಕಂಡು ಹಿಡಿದವರು ಮಾತ್ರ ಋಷಿಗಳಲ್ಲ. ಅನಂತರವೂ ಆಯಾ ಮಂತ್ರಗಳ ಪುರಶ್ಚರಣ ಜಪಾದಿಗಳನ್ನು ಮಾಡಿ ಅದರಿಂದ ವಿಶೇಷ ಪುಣ್ಯಫಲ ಪ್ರಯೋಜನಗಳನ್ನು ಪಡೆದರೂ ಆಯಾ ಮಂತ್ರಗಳ ಋಷಿಗಳಾಗಬಹುದು.

ಗಾಯತ್ರಿ ಮಂತ್ರಕ್ಕೆ ವಿಶ್ವಾಮಿತ್ರರ ಋಷಿಗಳು ಎಂಬುದು ಎಲ್ಲರಿಗೂ ತಿಳಿದ ವಿಷಯ. ಸಾಯಣರ ಋಷಿ ಲಕ್ಷಣದಂತೆ ವಿಶ್ವಾಮಿತ್ರರೇ ಗಾಯತ್ರಿ ಮಂತ್ರದ ಪ್ರಥಮದ್ರಷ್ಟಾರರಾಗಬೇಕಾಗುವದು. ಆದರೆ ವಸ್ತುಸ್ಥಿತಿ ಇದಕ್ಕೆ ವಿಪರೀತವಾಗಿದೆ. ವಿಶ್ವಾಮಿತ್ರರಿಗಿಂತಲೂ ಮೊದಲು ಗಾಯತ್ರಿ ಮಂತ್ರವು ಪ್ರಚಾರದಲ್ಲಿದ್ದಿತು. ವಿಶ್ವಾಮಿತ್ರರಿಗಿಂತ ಮೊದಲು ಇದ್ದ ಬ್ರಾಹ್ಮಣರು ಗಾಯತ್ರೀ ಜಪವನ್ನು ಮಾಡುತ್ತಿರಲಿಲ್ಲವೇ ? ಮಾಡುತ್ತಿರಲಿಲ್ಲವೆಂದರೆ ಅವರು ಬ್ರಾಹ್ಮಣರು ಹೇಗಾದಾರು!

ಆದರೆ ಕ್ಷತ್ರಿಯರಾದ ವಿಶ್ವಾಮಿತ್ರರು ಈ ಗಾಯತ್ರೀಮಂತ್ರದ ಪುರಶ್ಚರಣದ ಪ್ರಭಾವದಿಂದ ಬ್ರಹ್ಮರ್ಷಿ ಪದವಿಗೇರಿದ್ದರಿಂದ ಅವರೇ ಅದಕ್ಕೆ ದ್ರಷ್ಟಾರರೆಂದು ಪ್ರಸಿದ್ಧಿಯಾಯಿತು.

ಈ ವಿಷಯದಲ್ಲಿ ಮೈತ್ರಾಯಣೀ ಸಂಹಿತೆಯಲ್ಲಿನ ಒಂದು ಕಥೆ ಉದ್ಬೋಧಕವಾಗಿದೆ. ವೈವಸ್ವತ ಮನುವಿನ ಮಗನಾದ ನಾಭಾನೇದಿಷ್ಟನು ಗುರುಕುಲದಲ್ಲಿನ ಅಧ್ಯಯನ ಮುಗಿಸಿ ಮನೆಗೆ ಮರಳುವಷ್ಟರಲ್ಲಿ ಅವನ

ಶ್ರೀ ಪಂಡರೀನಾಥಾಚಾರ್ಯ
ಗಲಗಲಿ

ಸಹೋದರರು ತಂದೆಯ ಆಸ್ತಿಯ ಪಾಲುಮಾಡಿಕೊಂಡಿದ್ದರು. ಕೊನೆ ಮಗನಾದ ಈ ನಾಭಾನೇದಿಷ್ಠನಿಗೆ ಯಲ್ಲಿ ಏನೂ ಉಳಿಸಿರಲಿಲ್ಲ. ಈ ತಂದೆಯ ಗಮನಕ್ಕೆ ಬಂದಾಗ ಅ ನಾಭಾನೇದಿಷ್ಠನನ್ನು ಬಳಿಗೆ ಕರೆದು ಎ ಮಂತ್ರಗಳನ್ನು ಉಪದೇಶಿಸಿದ ನಾಭಾನೇದಿಷ್ಠನು ಅಂಗಿರಸ್ ಋಷಿ ಯಜ್ಞದಲ್ಲಿ ಈ ಎರಡೂ ಮಂತ್ರಗಳ ಸರಿಯಾಗಿ ಹೇಳಿ ಸಮೃದ್ಧ ಸಂಪತ್ತನು ಜೊತೆಗೆ ಸನ್ಮಾನವನ್ನೂ ಪಡೆದ.

ಋಗ್ವೇದದ ಹತ್ತನೆಯ ಮಂಡಲ ಬರುವ ಈ ಸೂಕ್ತಗಳಿಗೆ ನಾಭಾನೇದಿಷ್ಠ ಋಷಿಯೆಂಬುದು ಸ್ಪಷ್ಟವಿದೆ. ಆ ಅವುಗಳಿಗೆ ನಾಭಾನೇದಿಷ್ಠನೇ ಆ ದ್ರಷ್ಟಾರನಾಗಿಲ್ಲ. ಇವನಿಗೆ ಮೊದ ಇವನ ತಂದೆಯೇ ಅವುಗಳನ್ನು ಇವ ಉಪದೇಶವಿತ್ತಿದ್ದಾನೆಂದು ಮೈತ್ರಾಯ ಸಂಹಿತೆಯ ಕಥಾನಕದಿಂದ ತಿಳಿ ಬರುತ್ತದೆ. ಈ ಮಂತ್ರಗಳಿಗೆ ಆ ದ್ರಷ್ಟಾರನು ನಾಭಾನೇದಿಷ್ಠನೂ ಅಲ್ಲ. ಅ ತಂದೆಯಾದ ವೈವಸ್ವತಮನುವೂ ಅ ಆದರೆ ತಂದೆಯಿಂದ ಉಪದಿಷ್ಟನಾ ನಾಭಾನೇದಿಷ್ಠನು ಆ ಮಂತ್ರಗಳನ್ನು ಭ ಯಿಂದ ಜಪಿಸಿ, ತಪಿಸಿ, ಪುರಶ್ಚರಣ ಮಾ ಸಿದ್ಧಿ ಪಡೆದುದರಿಂದ ಅವನು ಆ ಮಂ ಗಳ ಪ್ರಥಮದರ್ಶನ ಮಾಡಿಕೊಂಡವನ ದಿದ್ದರೂ ಆ ಮಂತ್ರಗಳಿಗೆ 'ಋಷಿ' ಎ ಸಿದ್ದಾನೆ.

ಮನು ಮತ್ತು ಅವನ ಮಕ್ಕಳ ಆಖ್ಯಾನವು ಮೈತ್ರಾಯಣೀಸಂಹಿತೆಯ ಮಾತ್ರವಲ್ಲ, ಐತರೇಯ ಬ್ರಾಹ್ಮ ದಲ್ಲಿಯೂ (೫–೧೪) ತೈತ್ತಿರೀಯ ಸಂಹಿ ಯಲ್ಲಿಯೂ (೩–೧–೯–೩೦) ಇದೇ ರೂ ದಲ್ಲಿ ಬಂದಿರುವುದರಿಂದ ಈ ಆಖ್ಯಾನ ಪರಮಪ್ರಾಮಾಣಿಕವೆನಿಸಿದೆ.

ಇದರಂತೆ ಋಗ್ವೇದದ ಪ್ರಥಮ ಮಂಡ ದಲ್ಲಿನ ಇಪ್ಪತ್ನಾಲ್ಕನೇ ಸೂಕ್ತವಾ "ಕಸ್ಯನೂನಂ......" ಎಂಬ ಮಂತ್ರಕ

(33 ನೇ ಪುಟ ನೋಡಿ

# ಅಷ್ಟಾವಧಾನ

ಮಾನವ ಮಸ್ತಿಷ್ಕ ಅನೇಕ ವಿಷಯಗಳನ್ನು ಏಕಕಾಲದಲ್ಲಿ ಗ್ರಹಿಸಬಲ್ಲದು – ನೆನಪಿಟ್ಟುಕೊಳ್ಳಬಲ್ಲದು ಎಂಬ ವೈಜ್ಞಾನಿಕ ಸತ್ಯದ ಆಧಾರದ ಮೇಲೆ ಹಬ್ಬಿದ ಪ್ರತಿಭಾವಲ್ಲರಿಯಲ್ಲಿ ಅರಳಿದ ಸುಂದರ ಸುರಭಿತ ಪುಷ್ಪವೇ ಅವಧಾನಕಲೆ–ಇದು ಆಂಧ್ರದೇಶದಲ್ಲಿ ಬೆಳೆದು ಬಂದಿರುವ ಒಂದು ವಿಶಿಷ್ಟಕಲೆ–ಇದು ಎಲ್ಲ ಭಾಷೆಗಳಲ್ಲೂ ನಡೆಸಲು ಸಾಧ್ಯವಾದರೂ – ಪ್ರಸ್ತುತ – ಆಂಧ್ರದೇಶದಲ್ಲಿ ಮಾತ್ರ ವಿಜೃಂಭಿಸುತ್ತಿರುವ ಒಂದು ಪ್ರತಿಭಾ ವೈಭವ. ಶತಾವಧಾನ, ಸಹಸ್ರಾವಧಾನ ಎಂಬ ಕ್ರಮಗಳೂ ಬಳಕೆಯಲ್ಲಿವೆ.

ಕಾಳಿದಾಸನ ಕಾಲದಲ್ಲಿ ಆಶ್ರಯದಾತನಾದ ಭೋಜ ರಾಜ, ತುಂಬಿದ ಸಭೆಯಲ್ಲಿ, ಚಿತ್ರವಿಚಿತ್ರಾರ್ಥದಿಂದ ಕೂಡಿದ ಸಮಸ್ಯೆಗಳನ್ನು ಕೊಡುವುದು, ಆಸ್ಥಾನದ ದಿಗ್ದಂತಿ ಪಂಡಿತರು ಆ ಸಮಸ್ಯೆಯನ್ನು ಪೂರ್ಣಗೊಳಿಸುವುದು- ಅಂದರೆ ರಾಜ ಕೊಟ್ಟ ಸಮಸ್ಯೆಯನ್ನು ಪದ್ಯದ ಕೊನೆಯ ಪಾದ ಮಾಡಿಕೊಂಡು, ಉಳಿದ ಮೂರು ಪಾದಗಳನ್ನು ಛಂದೋಬದ್ಧವಾಗಿ, ಆಶುಕವಿತೆಯ ರೂಪದಲ್ಲಿ ರೂಪದಲ್ಲಿ ಹೇಳುವುದು- ಇಲ್ಲಿ ಗಮನಾರ್ಹವಾದ ಅಂಶ. ಈ ರೀತಿಯ ಪ್ರತಿಭಾಪ್ರದರ್ಶನ ಆ ಕಾಲದಲ್ಲಿ ನಡೆಯುತ್ತಿತ್ತೆಂದು ಇತಿಹಾಸದಲ್ಲಿ ಉಲ್ಲೇಖವಿದೆ.

ಅವಧಾನ ನಿರ್ವಹಿಸುವಾತನನ್ನು ಅವಧಾನಿ ಎಂದು ಕರೆಯುತ್ತಾರೆ. ಈತ ತುಂಬ ಪ್ರತಿಭಾವಂತ, ಪಂಡಿತ, ಆಶು ಕವಿತಾರಚನಾಚತುರ, ವಿವಿಧ ಭಾಷಾವೇತ್ತ, ಛಂದಶ್ಶಾಸ್ತ್ರಪಾರಂಗತನಾಗಿರಬೇಕು. ಸಮಯಸ್ಫೂರ್ತಿ, ಹಾಸ್ಯಪ್ರಜ್ಞೆ-ಸರಸಸ್ವಭಾವ ಒಂದು ಮಾತಿಗೆ ನಾನಾರ್ಥಗಳನ್ನು ಕಲ್ಪಿಸುವ ಸಾಮರ್ಥ್ಯ. ಆತನಿಗೆ ಅತ್ಯಗತ್ಯ, ಎಲ್ಲಕ್ಕೂ ಮಿಗಿಲಾಗಿ ಅವಧಾನಿಗೆ ಚಿತ್ತೈಕಾಗ್ರತೆ ಬಹುಮುಖ್ಯ. ಏಕೆಂದರೆ ಅವಧಾನಿ ಕಾಗದ-ಲೇಖನಿ ಬಳಸುವಂತಿಲ್ಲ. ತೀವ್ರತರ ಸ್ಮೃತಿಶಕ್ತಿ ಅವಧಾನಿಯ ಮೂಲ ಬಂಡವಾಳವಾಗಿರುತ್ತದೆ. ಅನಂತ ಕಲ್ಪನಾಚಾತುರ್ಯ ಅವಧಾನಿಯ ಬ್ರಹ್ಮಾಸ್ತ್ರವಾಗಿರುತ್ತದೆ. ಅಷ್ಟಾವಧಾನಿಯಾದವನು ಸಭೆಯಲ್ಲಿ ಎಂಟುಜನ ವಿದ್ವಾಂಸರನ್ನೆದುರಿಸಬೇಕಾಗುತ್ತದೆ. ಶತಾವಧಾನಿ ನೂರುಜನ, ಸಹಸ್ರಾವಧಾನಿ ಸಾವಿರಜನ ಪಂಡಿತರನ್ನೆದುರಿಸಬೇಕು ಈ ಪಂಡಿತರನ್ನು–ಪೃಚ್ಛಕರೆನ್ನುತ್ತಾರೆ. ಪೃಚ್ಛಕ ಎಂದರೆ ಪ್ರಶ್ನೆ ಕೇಳುವವನು ಎಂದರ್ಥ. ಅಷ್ಟಾವಧಾನದಲ್ಲಿ ಪೃಚ್ಛಕರು ಎಂಟು ವಿಭಿನ್ನ ವಿಚಾರಗಳನ್ನು ಕುರಿತು ಪ್ರಶ್ನೆ ಕೇಳುತ್ತಾರೆ.

ನಿಷೇಧಾಕ್ಷರಿ–ದತ್ತಪದಿ–ಸಮಸ್ಯೆ – ವರ್ಣನೆ–ವ್ಯಸ್ತಾಕ್ಷರಿ–ಅಪ್ರಸ್ತುತ ಪ್ರಸಂಗ–ಗಂಟಾನಾದ–ಆಶುಕವಿತೆ – ಇವು ಅಷ್ಟಾವಧಾನದ ಎಂಟು ಪ್ರಧಾನ ಅಂಶಗಳು. ಈ ಒಂದೊಂದಂಶವನ್ನು ಕುರಿತು ಒಬ್ಬೊಬ್ಬ ಪೃಚ್ಛಕ ಪ್ರಶ್ನೆ ಕೇಳುತ್ತಾನೆ ಅವಧಾನಿ ಎಲ್ಲರಿಗೂ ಏಕಕಾಲದಲ್ಲಿ ಉತ್ತರ ಕೊಡಬೇಕು

ಉದಾಹರಣೆಗೆ–ನಿಷೇಧಾಕ್ಷರಿ ಪೃಚ್ಛಕ, ಲಕ್ಷ್ಮೀದೇವಿಯನ್ನು ಕುರಿತು ಚಂಪಕಮಾಲಾ ವೃತ್ತದಲ್ಲಿ ಒಂದು ಪದ್ಯ ಹೇಳಿ ಎನ್ನುತ್ತಾನೆ ಆಗ ಅವಧಾನಿ ಶ್ರೀ–ಎಂದು ಪ್ರಾರಂಭಿಸುತ್ತಾನೆ. ಮುಂದಿನ ಅಕ್ಷರ ಲ ಹಾಕಬಹುದೆಂದು ಪೃಚ್ಛಕ ಲ–ನಿಷೇಧ ಎನ್ನುತ್ತಾನೆ. ಅವಧಾನಿ–ವ ಎನ್ನುತ್ತಾನೆ. ಮುಂದಿನ ಅಕ್ಷರ–ನಿ – ಹಾಕಬಹುದೆಂದು ಈತ ನಿ–ನಿಷೇಧ ಎನ್ನುತ್ತಾನೆ. ಅವಧಾನಿ–ರ–ಎನ್ನುತ್ತಾನೆ–ಮುಂದಿನ ಅಕ್ಷರ ಮ – ಹಾಕಬಹುದೆಂದು ಮ–ನಿಷೇಧ ಎನ್ನುತ್ತಾನೆ. ಅವಧಾನಿ–ವೈ–ಎನ್ನುತ್ತಾನೆ. ಮುಂದಿನ ಅಕ್ಷರ–ಕುಂಠ–ಬರ ಬಹುದೆಂದು–ಕುಂ–ನಿಷೇಧ ಎನ್ನುತ್ತಾನೆ. ಹೀಗೆ ಒಂದಕ್ಷರ ಜೋಡಿಸುವ ವೇಳೆಗೆ ಮುಂದಿನ ಅಕ್ಷರ ಯಾವುದಿರಬಹುದೆಂದು ಯೋಚಿಸಿ ಅದನ್ನು ನಿಷೇಧಗೊಳಿಸುತ್ತಾನೆ ಪೃಚ್ಛಕ ಅವಧಾನಿ ಗಾಬರಿಯಾಗುವುದಿಲ್ಲ. ನಿಷೇಧಿಸಲಾದ ಅಕ್ಷರಗಳನ್ನು ಬಿಟ್ಟು ಬೇರೆ ಅಕ್ಷರಗಳನ್ನು ಜೋಡಿಸಿಕೊಳ್ಳುತ್ತ ಹೋಗಬೇಕು. ಪದ್ಯಲಕ್ಷ್ಮಿಯು ಪರವಾಗಿರಬೇಕು. ಛಂದಸ್ಸಿನ ಕಡಿವಾಣ ಬೇರೆ–ಕವಿತೆಯ ಸಾಲುಗಳು ಅವಧಾನಿಯ ತಲೆಯಲ್ಲಿ ತಯಾರಾಗುತ್ತಿರಬೇಕು. ಏಕೆಂದರೆ ಆತ ಯಾವ ಲೇಖನ ಸಾಮಗ್ರಿಗಳನ್ನು ಬಳಸುವಂತಿಲ್ಲ. ಪೃಚ್ಛಕ ಕೇಳಿದ ಛಂದಸ್ಸಿನಲ್ಲಿ ಕವಿತೆಯ ಒಂದು ಪಾದ ತಯಾರಾಯಿತೆನ್ನಿ–ಅಷ್ಟರಲ್ಲಿ ದತ್ತಪದಿ ವಿಭಾಗದ ಪೃಚ್ಛಕ ನಾಲ್ಕು ಪದಗಳನ್ನು ಸೂಚಿಸಿ–ಆ ಪದಗಳನ್ನೇ ಕವಿತೆಯ ಮೊದಲ ಪದಗಳಾಗಿರಿಸಿ ನಾಲ್ಕು ಪಾದದ ಕವಿತೆ ರಚಿಸಿರಿ–ಆ ಕವಿತೆಯು ಶಾರ್ದೂಲ ವಿಕ್ರೀಡಿತ ವೃತ್ತದಲ್ಲಿರಲಿ–ಎನ್ನುತ್ತಾನೆ. ಉದಾಹರಣೆಗೆ ರಕ್ಷೆ–ಭಿಕ್ಷೆ–ಪಕ್ಷೆ–ಕಕ್ಷೆ ಈ ನಾಲ್ಕು ಪದಗಳನ್ನು ಬಳಸಿ ಕೊಂಡು ಮಹಾಭಾರತದ ಒಂದು ಪ್ರಸಂಗವನ್ನು ಶಾರ್ದೂಲ ವಿಕ್ರೀಡಿತ ವೃತ್ತದಲ್ಲಿ ಹೇಳಿ ಎನ್ನುತ್ತಾನೆ. ಮೊದಲನೆ ಪೃಚ್ಛಕನು ಹೇಳಿದ ವಿಚಾರದಲ್ಲಿ ಕವಿತೆಯ ಒಂದನೆ ಪಾದ ತಯಾರಾಗಿರಬಹುದು. ಅಷ್ಟರಲ್ಲಿ ದತ್ತಪದಿಯ ಪೃಚ್ಛಕ ಕೇಳಿದ ರೀತಿಯಲ್ಲಿ ಪದ್ಯರಚನೆಯಾಗಬೇಕು. ಅದರಲ್ಲಿ ಎರಡು ಪಾದ ತಯಾರಾಯಿತೆನ್ನಿ ಅಷ್ಟರಲ್ಲಿ ಇನ್ನೊಬ್ಬ ಒಂದು ಸಮಸ್ಯೆಯನ್ನೊಡ್ಡುತ್ತಾನೆ. ಸೂಚಿತವಾದ ಸಮಸ್ಯೆ ಕವಿತೆಯ ನಾಲ್ಕನೆಪಾದದಲ್ಲಿರಬೇಕು. ಮೇಲಿನ ಮೂರು ಪಾದಗಳು ಈ ಸಮಸ್ಯೆಗೆ–ಅದರ ಅರ್ಥಕ್ಕೆ ಸರಿಹೊಂದುವಂತಿರಬೇಕು, ಮತ್ತು ಕವಿತೆ ಮತ್ತೇಭವಿಕ್ರೀಡಿತ ವೃತ್ತದಲ್ಲಿರಬೇಕು–ಎಂದು ಅತನ ಭಯಂಕರ ಷರತ್ತು!! ಈವಾಗಿನ ಯೋಚನೆ ಮಾಡುತ್ತ ಪ್ರಥಮ ಪಂಕ್ತಿಯನ್ನು ರಚಿಸಿಕೊಳ್ಳುವ ವೇಳೆಗೆ ನಿಷೇಧಾಕ್ಷರಿಯಾತ ನಾನು ಕೇಳಿದ ಚಂಪಕಮಾಲಾವೃತ್ತದ ಎರಡನೆ ಪಾದ ಹೇಳಿ–ಎಂದು ಕೇಳುತ್ತಾನೆ ಅಲ್ಲೂ ಅಕ್ಷರಗಳನ್ನು ನಿಷೇಧಿಸುತ್ತಾನೆ. ಅಷ್ಟರಲ್ಲಿ ವರ್ಣನ ವಿಭಾಗದ ಪೃಚ್ಛಕ ಕೇಳುತ್ತಾನೆ–ಉದಾಹರಣೆಗೆ ಸರ್ಪಾಸ್ತ್ರ ಪ್ರಯೋಗಿಸಿದಾಗ ಕರ್ಣನ ಮನಸ್ಸ್ಥಿತಿ ಹೇಗಿತ್ತೆಂಬುದನ್ನು ವರ್ಣಿಸಿ ಒಂದು ಕಂದ ಪದ್ಯ ಹೇಳಿ ಎನ್ನುತ್ತಾನೆ. ಕಂದ ಪದ್ಯದ ಮೊದಲ ಸಾಲು ತಯಾರು ಮಾಡಿ ಕೊಳ್ಳುವಷ್ಟರಲ್ಲಿ ಅವಧಾನಿಗೆ ಇನ್ನೊಂದು ಪ್ರಶ್ನೆ ಹಾಕುತ್ತಾನೆ–ಆಶುಕವಿತಾವಿಭಾಗದ ಪೃಚ್ಛಕ ಉದಾಹರಣೆಗೆ–ಇಂದಿರಾಗಾಂಧಿ, ಮಹಾತ್ಮ ಗಾಂಧಿಗೂ ಜಗಳವಾಯ್ತೆಂದು ಕಲ್ಪನೆ ಮಾಡಿಕೊಂಡು ಆ ಜಗಳವನ್ನು ಮಂದಾಕ್ರಾಂತ ವೃತ್ತದಲ್ಲಿ ವಿವರಿಸಿ ಎನ್ನುತ್ತಾನೆ. ಈ ಪದ್ಯದ ಮೂರು ಸಾಲು ತಯಾರಾಯ್ತೆಂದು ಕೊಳ್ಳುವಷ್ಟರಲ್ಲಿ ದತ್ತಪದಿಯ ಪೃಚ್ಛಕ ನಾನು ಕೇಳಿದ ಪದ್ಯದ ಮೂರನೆಯ ಸಾಲು ಹೇಳಲಿಲ್ಲವಲ್ಲವೇ ಎಂದು ಕೇಳುತ್ತಾನೆ. ಆಗ ಅವಧಾನಿ ಈ ಮುಂಚೆ ತಾನು ರಚಿಸಿಕೊಂಡಿದ್ದ ಎರಡು ಸಾಲುಗಳನ್ನು ಜ್ಞಾಪಕದಲ್ಲಿರಿಸಿ ಕೊಂಡಿದ್ದು ಮೂರನೆ ಸಾಲನ್ನು ರಚಿಸಿ ಹೇಳಬೇಕಾಗುತ್ತದೆ. ಅಷ್ಟರಲ್ಲಿ ಅಪ್ರಸ್ತುತ ಪ್ರಸಂಗ ವಿಭಾಗದಾತ ಪ್ರಶ್ನೆ ಕೇಳುತ್ತಾನೆ. ಈತನು ಕೇಳುವ ಪ್ರಶ್ನೆಗಳಿಗೆ ಯಾವ ನಿಯಮವೂ ಇರುವುದಿಲ್ಲ. ಈತ ಮನಸಿಗೆ ತೋಚಿದ ವಿಚಾರಗಳ ಬಗ್ಗೆ ಪ್ರಶ್ನೆ ಹಾಕಬಹುದು, ಈ ಪ್ರಶ್ನೆಗೆ ಸರಸವಾಗಿ–ವಿನೋದವಾಗಿ ಉತ್ತರ ಕೊಡಬೇಕೇ ವಿನಹ ಇಲ್ಲಿ ಪದ್ಯರಚನೆ ಮಾಡಬೇಕಾಗಿಲ್ಲ. ಉದಾಹರಣೆಗೆ – ಸ್ವಾಮಿ – ತಾವಿಲ್ಲಿಗೆ ಬರುವಾಗ ಜತೆಯಲ್ಲಿ ಸಿನಿಮಾತಾರೆಯೊಬ್ಬಳನು ಕರೆತಂದಿರಂತೆ–ಆಕೆಯನ್ನು ಸಭೆಗೇಕೆ ಕರೆತರಲಿಲ್ಲ? ಈ ವಿಚಾರ ನಿಮ್ಮ ಪತ್ನಿಗೆ ತಿಳಿದಿದೆಯೆ? –ಇಂತಹ

ವಿದ್ವಾನ್ ಬ. ನ. ಗುಂಡೂರಾವ್

# ತಿರುಮಲೆಯಲ್ಲಿ ವಸತಿ ಸೌಲಭ್ಯ

ಸರ್ವತೋಮುಖವಾಗಿ ಏರಿದ ದರಗಳ ಹಿನ್ನೆಲೆಯಲ್ಲಿ ತಿರುಮಲೆಯಲ್ಲಿನ ತಿ. ತಿ. ದೇವಸ್ಥಾನಗಳ ವಸತಿ ಸೌಲಭ್ಯದ ದರಗಳನ್ನು ಪುನರ್ವಿಮರ್ಶಿತಗೊಳಿಸಲಾಗಿದೆ. ತಿರುಮಲೆಯಲ್ಲಿ ದೊರೆಯುವ ವಸತಿಗಳ ಬಾಡಿಗೆಯ ಪರಿಷ್ಕೃತ ದರಗಳನ್ನು ಕೆಳಗೆ ಸೂಚಿಸಲಾಗಿದೆ. ಯಾತ್ರಿಕರು ದಯವಿಟ್ಟು ಗಮನಿಸಿ ಸಹಕರಿಸಬೇಕಾಗಿ ವಿನಂತಿ.

| ವಸತಿ – ಸ್ಥಳ | | ಪರಿಷ್ಕೃತ ಬಾಡಿಗೆ/ದಿನಕ್ಕೆ |
|---|---|---|
| ವಿಶೇಷರೀತಿಯ ಕಾಟೇಜುಗಳು | ರೂ | 100–00 |
| ಟಿ. ಬಿ ಒಳಗಿನ ಕಾಟೇಜುಗಳು | ರೂ | 70–00 |
| ಟಿ. ಬಿ. ಹೊರಗಿನ ಕಾಟೇಜುಗಳು | | |
| ಮೂರನೆಯ ಸಾಲೂ ಸೇರಿದಂತೆ | | |
| ಎ ವಿಭಾಗ– ಗ್ಯೆಸರ್‌ನೊಂದಿಗೆ | ರೂ | 20–00 |
| ಬಿ ವಿಭಾಗ– ಗ್ಯೆಸರ್ ರಹಿತ | ರೂ | 12–00 |
| ವಿ ವಿ.ಸಿ. ಹಾಗೂ ಎಂ.ಬಿ.ಸಿ 31 ಹಾಗೂ 26 | ರೂ | 70–00 |
| ಎಂ.ಬಿ.ಸಿ. ಎ–ಭಾಗ ಗ್ಯೆಸರ್‌ನೊಂದಿಗೆ | ರೂ | 20–00 |
| ಎಂ.ಬಿ.ಸಿ. ಬಿ–ಭಾಗ ಗ್ಯೆಸರ್ ರಹಿತ | ರೂ | 12–00 |
| ಟಿ.ಬಿ. ಸೂಟ್‌ಗಳು ಗ್ಯೆಸರ್‌ನೊಂದಿಗೆ | ರೂ | 15–00 |
| ಎ.ಟಿ.ಸಿ ಸೂಟ್‌ಗಳು ಗ್ಯೆಸರ್ ರಹಿತ | ರೂ | 10–00 |
| ಎ ಟಿ.ಸಿ. ನೆಲ ಅಂತಸ್ತು | | |
| ಎ–ಭಾಗ ಮೊದಲ ಅಂತಸ್ತಿನಲ್ಲಿಯಂತೆ | ರೂ | 30–00 |
| ಬಿ-ಭಾಗ | ರೂ | 30–00 |
| ಎಸ್.ಎಂ.ಸಿ., ಎಸ್.ಎನ್ ಸಿ, ಎ.ಎನ್.ಸಿ, | | |
| ಜಿ.ಎನ್ ಸಿ, ಎಚ್.ವಿ ಸಿ : | | |
| ಎ–ಭಾಗ ಗ್ಯೆಸರ್ ರಹಿತ | ರೂ | 12–00 |
| ಬಿ–ಭಾಗ ” | ರೂ | 12–00 |
| ಎಚ್.ವಿ.ಡಿ.ಸಿ. ಸೂಟ್ಸ್ (ಪ್ರತಿಯೊಂದು) | | |
| ಗ್ಯೆಸರ್ ನೊಡನೆ | ರೂ | 25–00 |
| ಎಚ್ ವಿ.ಸಿ. ಸೂಟ್ಸ್ (ಪ್ರತಿಯೊಂದು) | | |
| ಗ್ಯೆಸರ್‌ರಹಿತ | ರೂ | 12–00 |
| ಎಚ್.ವಿ.ಸಿ. ಅತಿಥಿಗೃಹ ದೊಡ್ಡ ಸೂಟ್ | | |
| (ಗ್ಯೆಸರ್‌ನೊಡನೆ) | ರೂ | 50–00 |
| ” ” ಸಣ್ಣ ಸೂಟ್ | | |
| (ಗ್ಯೆಸರ್ ರಹಿತ) | ರೂ | 25–00 |
| ಎಸ್.ವಿ. ಅತಿಥಿಗೃಹ ದೊಡ್ಡ ಸೂಟ್ | ರೂ | 70–00 |
| ” ” ಮೂಲೆ ಸೂಟ್ | ರೂ | 60–00 |
| ” ” ಇತರೆ | ರೂ | 50–00 |
| ಎಸ್.ಜಿ. ಅತಿಥಿಗೃಹ I ಹಾಗೂ II | | |
| ಮೂಲೆ ಸೂಟ್ | ರೂ | 60–00 |

| | | |
|---|---|---|
| ಇತರೆ | ರೂ | 50–00 |
| ಎಚ್.ಆರ್.ಜಿ. ಪೂರ್ತಿ ಕಾಟೇಜು | ರೂ | 250–00 |
| ಎಸ್. ಪಿ. ಅತಿಥಿಗೃಹ : | | |
| ಮಾಸ್ಟರ್ ಸೂಟ್ ಸಂ. 9 ಹಾಗೂ | | |
| ಕಿರಿಯ ಸೂಟ್‌ಗಳು ಸಂ. 7, 9 ಪರಿಷ್ಕರಣವಿಲ್ಲ | ರೂ | 750-00 |
| ಮಾಸ್ಟರ್ ಸೂಟ್ ಸಂ. 1 | | |
| ಕಿರಿಯ ಸೂಟ್ ಸಂ. 6 ” | | |
| ಕಿರಿಯ ಸೂಟ್‌ಗಳು ಸಂ–2, 3, 4, 5, | ರೂ | 750-00 |
| ಶ್ರೀನಿಕೇತನ (ಪ್ರತಿ ಸೂಟ್), | | |
| ಎಸ್.ಪಿ. ನಗರ್ ಅತಿಥಿಗೃಹ ನಂ. IV | ರೂ | 250–00 |
| ಇಂದಿರಾ ಅತಿಥಿಗೃಹ (ಎ. ಸಿ.) (ಪ್ರತಿಸೂಟ್) | | |
| (ಎಸ್. ಪಿ. ನಗರ್ ಅತಿಥಿಗೃಹ ನಂ–II) | ರೂ | 250–00 |
| ಬಾಲಕುಟೀರಂ (ಎ.ಸಿ.) (ಪ್ರತಿಸೂಟ್) | | |
| (ಎಸ್. ಪಿ. ನಗರ್ ಅತಿಥಿಗೃಹ ನಂ–III) | ರೂ | 250–00 |
| ಗೋಕುಲಂ (ಎ. ಸಿ.) | ರೂ | 300–00 |
| ಮದುವೆಯ ಹಾಲ್‌ಗಳು–ದಿನವೊಂದಕ್ಕೆ (ಪ್ರತಿಯೊಂದು). | | |
| ಎಸ್.ಎಂ.ಸಿ. 272, 260, 266, 267 | ರೂ | 75–00 |
| ರೂಯಾ 248 | ರೂ | 100–00 |
| ಗೋಗಿನೇನಿ 226 | ರೂ | 100–00 |
| ಚಿದಂಬರಂ ಚೆಟ್ಟಿಯಾರ್ ಕಾಟೇಜಿ | ರೂ | 125–00 |
| ಎ. ಟಿ. ಸಿ.– 99 | ರೂ | 100–00 |
| ಟಿ. ಬಿ. ಸಿ. 136, 152, 71 | ರೂ | 75–00 |
| ಬಾಲಾಜಿ ಕಲ್ಯಾಣ ಮಂಟಪ | ರೂ | 500–00 |
| ಸೀತಾರಾಮ ಕಲ್ಯಾಣ ಮಂಟಪ | ರೂ | 1000–00 |
| ಹೊಸದಾಗಿ ನಿರ್ಮಿತವಾದುವು : | | |
| ಟಿ.ಬಿ.ಸಿ., ಎ.ಟಿ.ಸಿ. ಪೂರ್ತಿ ಕಾಟೇಜು | ರೂ | 60–00 |
| ಮೊದಲ ಅಂತಸ್ತಿನ | | |
| ಕಾಟೇಜುಗಳು ಅರ್ಧ ಕಾಟೇಜು | ರೂ | 30–00 |
| ಎಸ್. ಎನ್. ಅತಿಥಿಗೃಹ ಪ್ರತಿ ಸೂಟ್ | ರೂ | 50–00 |
| ರಾಮಬಗೀಚಾ ಅತಿಥಿಗೃಹ ” | ರೂ | 50–00 |

ಯಾತ್ರಿಕರು ಸಹಕರಿಸಬೇಕೆಂದು ಕೋರಲಾಗಿದೆ — ಮುಂಗಡ ಕಾಯಿರಿಸುವಿಕೆಗಾಗಿ ಬರೆಯಿರಿ.

**ಉಪಕಾರ್ಯನಿರ್ವಹಣಾಧಿಕಾರಿ** (ಸ್ವಾಗತ–II)
ತಿ. ತಿ. ದೇವಸ್ಥಾನಗಳು, ತಿರುಮಲೆ.

ಚಿತ್ರವಿಚಿತ್ರ ಪ್ರಶ್ನೆಗಳು ಸಭೆಯನ್ನು ನಗೆಗಡಲಿ ಮುಳುಗಿಸುತ್ತವೆ ಅವಧಾನಿ ಆತನ ಪ್ರಶ್ನೆಗೆ ಅಷ್ಟೇ ಹಾಸ್ಯವಾಗಿ ಸೂಕ್ತವಾಗಿ ಉತ್ತರ ನೀಡಬೇಕಾಗುತ್ತದೆ. ಆದಾಗ ಸಭೆ ಇನ್ನಷ್ಟು ನಗುತ್ತದೆ ಅಷ್ಟರಲ್ಲಿ ನ್ಯಸ್ತಾಕ್ಷರಿಯ ಪೃಚ್ಛಕ ಪ್ರಶ್ನೆ ಹಾಕುತ್ತಾನೆ ಇವನ ಕ್ರಮವೇ ವಿಚಿತ್ರ. ತಾನೆ ಒಂದು ರಾಗದಲ್ಲಿ ಪದ್ಯ ರಚಿಸಿಕೊಂಡು ಅದರ ಅಕ್ಷರಗಳಿಗೆ 1-2-3-4 ಇತ್ಯಾದಿ ಸಂಕೇತಗಳನ್ನು ಕೊಟ್ಟು, ಅಸ್ತವ್ಯಸ್ತವಾಗಿ ಅಕ್ಷರಗಳನ್ನು ತತ್ಸಂಬಂಧೀ ಸಂಖ್ಯೆಗಳನ್ನು ಹೇಳುತ್ತಾನೆ. ಅವಧಾನಿ ಸಂಖ್ಯಾನುಸಾರ ಅಕ್ಷರಗಳನ್ನು ಜೋಡಿಸಿಕೊಂಡು ಆ ವಾಕ್ಯವನ್ನೋ ಆ ಕವಿತೆಯನ್ನೋ (ಪೃಚ್ಛಕನ ಬಳಿ ಇರುವ ಕವಿತೆ) ಹೇಳಬೇಕಾಗುತ್ತದೆ. (ಇದನ್ನು ತುಸು ಬದಲಿಸಿ ನ್ಯಸ್ತಾಕ್ಷರಿ ಎಂದು ಹೇಳುವುದುಂಟು ಇಲ್ಲಿ ಅಕ್ಷರಗಳನ್ನೂ, ಅವು ಬರುವ ಸ್ಥಳಗಳನ್ನೂ ನೀಡುವುದು, ಆ ಮೂಲಕ ಅವಧಾನಿಯನ್ನು ಹೊಸದಾದ ಒಂದು ಪದ್ಯವನ್ನು ಪೃಚ್ಛಕ ಕೇಳಿದ ವಿಷಯದಲ್ಲಿ ಹೇಳುವುದು.) ಅಷ್ಟರಲ್ಲಿ ಗಂಟಾನಾದವಾಗುತ್ತವೆ ಈ ಗಡಿಬಿಡಿಯ ಮಧ್ಯೆ, ಮಧ್ಯೆ ಎಷ್ಟುಸಲ ಗಂಟಾನಾದವಾಯಿತು ಎಂಬುದನ್ನು ಲೆಕ್ಕ ಇಟ್ಟುಕೊಂಡು ಆತ ಹೇಳಬೇಕು. ಬುದ್ಧಿವಂತರಾದ ಸಭಿಕರೂ ಲೆಕ್ಕವಿಟ್ಟಿರುತ್ತಾರೆ. ಅವಧಾನಿಯ ಲೆಕ್ಕಕ್ಕೂ ಇವರ ಲೆಕ್ಕಕ್ಕೂ ತಾಳೆ ಬೀಳಬೇಕು ನಿಷೇಧಾಕ್ಷರಿ–ದತ್ತಪದಿ–ಸಮಸ್ಯೆ ಈ ಮೂರು ವಿಭಾಗದ ಕವಿತೆಗಳ ನಾಲ್ಕುಪಾದಗಳೂ ರಚಿತವಾದಾಗ ಅವಧಾನ ಪೂರ್ಣವಾಗುತ್ತದೆ. ಈ ಕವಿತೆಗಳೆಲ್ಲ ಅವಧಾನಿಯ ತಲೆಯಲ್ಲೇ ರಚನೆಯಾಗಬೇಕು. ಇದಕ್ಕೆ ಸುಮಾರು 2–3 ಗಂಟೆಕಾಲ ಹಿಡಿಯುತ್ತದೆ. ಕಾಲಾವಧಿ ಅತಿ ಹೆಚ್ಚಾದಷ್ಟೂ ಅವಧಾನಿಗೆ ಪಾಂಡಿತ್ಯ ಸಾಲದೆಂದರ್ಥವಾಗುತ್ತದೆ. ಮಿಂಚಿನ ವೇಗದಲ್ಲಿ ಆತನ ತಲೆ ಕೆಲಸ ಮಾಡಬೇಕು.

ನಿಷೇಧಾಕ್ಷರಗಳನ್ನು ಬಿಟ್ಟು, ಬೇರೆ ಅಕ್ಷರ ಹಾಕುವಷ್ಟರಲ್ಲಿ ದತ್ತಪದಿ, ತತ್ಸಂಬಂಧವಾದ ಕವಿತೆಯ ಒಂದೆರಡು ಪಾದ ರಚನೆಯಾಗುವಷ್ಟರಲ್ಲಿ ಅಪ್ರಸ್ತುತ ಪ್ರಸಂಗ, ಆ ಒಳಗಾಗಿ ಆಶುಕವಿತೆ ಹೇಳಿ ಎನ್ನುತ್ತಾರೆ. ಅಷ್ಟರಲ್ಲಿ ಯಾವುದೊ ಪ್ರಸಂಗದ ವರ್ಣನೆ ಮಾಡು ಎನ್ನುತಾರೆ. ವಿಶೇಷವಾಗಿ ಪೌರಾಣಿಕ ಪ್ರಸಂಗಗಳನ್ನೇ ಕುರಿತು ಕೇಳುವುದು ಸಂಪ್ರದಾಯ. ಮಧ್ಯೆಮಧ್ಯೆ ಗಂಟಾನಾದ ಬೇರೆ. ಅವಧಾನಿಯ ಗಮನ ವನ್ನತ್ತಿತ್ತ ಎಳೆಯುವುದೇ ಅಪ್ರಸ್ತುತ ಪ್ರಸಂಗ ಹಾಗೂ ಗಂಟಾನಾದದ ಉದ್ದೇಶ

ಕವಿತೆಗಳ ನಾಲ್ಕೂ ಪಾದಗಳು ರಚನೆಯಾದ ಮೇಲೆ ಆಯಾ ಪೃಚ್ಛಕನಿಗೆ ಆಯಾಪದ್ಯಗಳನ್ನು ಹೇಳುವುದೇ ಅಲ್ಲದೆ ಇಂತಿಂತಹ ಪದಗಳನ್ನು ಸೂಚಿಸಿದ್ದರಿ–ಇಂತಿಂತಹ ಅಕ್ಷರಗಳನ್ನು ನಿಷೇಧಿಸಲಾಗಿತ್ತು ಎಂದು ಹೇಳಿ ಅವಧಾನಿಗಳು ಒಪ್ಪಿಸ ಆದರೆ ಕೇಳಿದ ಪ್ರಶ್ನೆಗಳು ಯಾವುದೆಂದು ಅಪ್ರಸ್ತುತ ಪ್ರಸಂಗದಾತರಿಗೆ ತಿಳಿಬೇಕಾಗಿಲ್ಲ

ಪೃಚ್ಛಕರು ಎಂಟುಜನರಿದ್ದರೆ ಅಷ್ಟಾವಧಾನ ನೂರುಜನರಿದ್ದರೆ ಶತಾವಧಾನ ಸಾವಿರ ಮಂದಿ ಇದ್ದರೆ ಸಹಸ್ರಾವಧಾನ.

ಸುಸ್ಥಿರವಾದ ಧಾರಣಾಶಕ್ತಿ ಇಲ್ಲದಿದ್ದರೆ, ಅವಧಾನ ಸಾಧ್ಯವಾಗುವುದಿಲ್ಲ ಜೊತೆಗೊಂಡ ಧರ್ಮನ್ನ–ರಾಮಾನುಜಭೂಷಣ – ರಾಮಚಂದ್ರ – ಮಧುರವಾಣಿ ವೆಂಕಾಜಮ್ಮ–ಕೃಷ್ಣಮ್ಮ ಮುಂತಾದವರು ಆಂಧ್ರದ ಅವಧಾನ ಸಂಪ್ರದಾಯದ ಆದ್ಯ ಪ್ರವರ್ತಕರು. 19 ನೇ ಶತಮಾನದ, ಗೋದಾವರಿ ಜಿಲ್ಲೆಯವರಾದ ಶ್ರೀ ತಿರುಪತಿ ವೆಂಕಟೇಶ್ವರ ಕವಿಗಳು ಅಷ್ಟಾವಧಾನಕ್ಕೊಂದು ನೀತಿನಿಯಮಗಳನ್ನು ಖಚಿತಗೊಳಿಸಿ ಅದನ್ನು ಕ್ರಮಬದ್ಧಗೊಳಿಸಿದವರು ತಿರುಪತಿಶಾಸ್ತ್ರಿ–ವೆಂಕಟಶಾಸ್ತ್ರಿ–ಎಂಬಿಬ್ಬರು ವಿದ್ವನ್ಮಣಿಗಳು ಏಕದೇಹನ್ಯಾಯದಿಂದ ಬಾಳಿದ ಕವಿಪುಂಗವರು. ಆಧುನಿಕ ಅವಧಾನ ಪರಂಪರೆಯ ಅಗ್ರಮಾನ್ಯರು

ಇತ್ತೀಚೆಗೆ ಸಂಗೀತ ಪ್ರಪಂಚದಲ್ಲಿ ಮೈಸೂರು ಸೋದರರು, ಬೊಂಬಾಯಿಸೋದರಿಯರು...... ಇತ್ಯಾದಿ ಮಾತುಗಳು ಕೇಳಿಬರುತ್ತಿದೆಯಲ್ಲವೇ ಅದೇರೀತಿಯಲ್ಲಿ ಆಂಧ್ರದೇಶದಲ್ಲಿ ಅವಧಾನ ಕಲೆಯಲ್ಲಿ ದೇವುಲಪಲ್ಲಿ ಸೋದರರು, ಕೊಪ್ಪರದ ಸೋದರರು, ವೆಂಕಟರಾಮಕೃಷ್ಣ ಕವಿಗಳು, ರಾಜಶೇಖರ ವೆಂಕಟಶೇಷಕವಿಗಳು .......ಇತ್ಯಾದಿ ವಿದ್ವನ್ಮಣಿಗಳ ಜೋಡಿ ಪ್ರಸಿದ್ಧವಾಗಿವೆ. ಇವರೆಲ್ಲ ಸ್ವಲ್ಪ ಹಿಂದಿನಕಾಲದ ಅವಧಾನಿಗಳು. ಇತ್ತೀಚಿನ ದಿನಗಳಲ್ಲಿ ಸರ್ವಶ್ರೀ ಗೌರಿಪದ್ದಿರಾಮಸುಬ್ಬಶರ್ಮ–ಚಂದ್ರಶೇಖರಶರ್ಮ–ಮಲ್ಲಿಕಾರ್ಜುನಶರ್ಮ – ದತ್ತಾತ್ರೇಯಶರ್ಮ–ನಾಗಫಣಿಶರ್ಮ– ಚೆಂಚುಸುಬ್ಬಯ್ಯ ನರಾಲ ರಾಮಿರೆಡ್ಡಿ–ಸಿ ವಿ ಸುಬ್ಬಣ್ಣ–ಸದಾನಂದ ಶಾಸ್ತ್ರಿ–ಮೇಡಸಾನಿ ಮೋಹನ್ .. ...ಮುಂತಾದವರು ಪ್ರತಿಭಾಪೂರ್ಣ ಅವಧಾನಿಗಳು. ಇವರಲ್ಲಿ ಕೆಲವರು ಶತಾವಧಾನಿಗಳಿದ್ದಾರೆ. ಮೇಡಸಾನಿ ಮೋಹನ್ ಅವರು ಮೂರು ದಶಗುಣಿತ ಅಷ್ಟಾವಧಾನಿ. (ನಿಷೇಧಾಕ್ಷರಿ ದತ್ತಪದಿ ಮುಂತಾದ ಅಷ್ಟಾವಧಾನದ ಎಂಟು ಭಾಗಗಳಲ್ಲಿ ಪ್ರತಿಭಾಗದಲ್ಲೂ ಹತ್ತು ಹತ್ತು ಜನ ಪೃಚ್ಛಕರಿದ್ದಾಗ, ದಶಗುಣಿತ ಅಷ್ಟಾವಧಾನ ವೆನ್ನುತ್ತಾರೆ. ಶ್ರೀ ಮೇಡಸಾನಿ ಮೋಹನ್ ಅವರಿಗೆ ಅವಧಾನ ಚಕ್ರವರ್ತಿ ಎಂಬ ಹೆಸರು–ಬಿರುದು ದೊರೆತಿದೆ. ಎರಡುಬಾರಿ ಕನಕಾಭಿಷೇಕದ ಗೌರವಕ್ಕೆ ಪಾತ್ರರಾಗಿದ್ದಾರೆ. ತಿರುಪತಿ ಟಿ. ಡಿ. ಫೈನ್ ಆರ್ಟ್ಸ್ ಅಕಾಡೆಮಿಯವರ ಪರವಾಗಿ ರಾಷ್ಟ್ರಪತಿಗಳ ಸನ್ಮಾನವೂ ದೊರೆತಿದೆ. ಒಮ್ಮೆ ಚತುರ್ಗುಣಿತ ಅಷ್ಟಾವಧಾನವನ್ನು ಯಶಸ್ವಿಯಾಗಿ ನಿರ್ವಹಿಸಿದ್ದಾರೆ. ಪ್ರಸ್ತುತ ಅನ್ನಮಾಚಾರ್ಯ ಪ್ರಾಜೆಕ್ಟ್‌ನ ವಿಶೇಷಾಧಿಕಾರಿಯಾಗಿದ್ದಾರೆ.)

ಅಷ್ಟಾವಧಾನದಲ್ಲಿ ಎಂಟು ಅಂಶಗಳಿದ್ದರೂ ಸಹ, ಅವಧಾನಿಗೆ ಉಕ್ಕಿನ ಕಡಲೆ ಯಾಗುವುದು ಮೂರು ಅಂಶಗಳು–ದತ್ತಪದಿ, ನಿಷೇಧಾಕ್ಷರಿ–ಸಮಸ್ಯೆ. ಇಲ್ಲೇ ಅವಧಾನಿಯ ಪ್ರತಿಭೆ–ಸಮಯ ಸ್ಫೂರ್ತಿ–ಪಾಂಡಿತ್ಯ–ಕಲ್ಪನಾ ಪ್ರಾಚುರ್ಯ ಮಿಂಚಿನಂತೆ ಹೊಳೆಯುವುದು.

ಅವಧಾನದಲ್ಲಿ ಪೃಚ್ಛಕರ ಸ್ಥಾನವೂ ಮುಖ್ಯವಾಗಿರುತ್ತದೆ. ಅವಧಾನಿಗೆ ಸಂಸ್ಕೃತಭಾಷೆಯಲ್ಲಿ ಪೂರ್ಣಪಾಂಡಿತ್ಯವಿರಬೇಕು. ಏಕೆಂದರೆ ಸಮಸ್ಯೆಯನ್ನು ಸಂಸ್ಕೃತದಲ್ಲಾದರೂ ಕೇಳಬಹುದು. ಆಗ ತತ್ಸಂಬಂಧಿ ಕವಿತೆಯನ್ನು ಸಂಸ್ಕೃತದಲ್ಲೇ ರಚಿಸಬೇಕಾಗುತ್ತದೆ. ಮತಿಗೆ ಸಾಣೆಹಿಡಿದು ಪ್ರಖರಗೊಳಿಸುವ ಕಲೆಯಾದ ಅವಧಾನಕ್ಕೆ ತೆಲುಗು ಬಹುಸೂಕ್ತವಾದ ಭಾಷೆಯೆಂದು ಬಲ್ಲವರ ಅಭಿಪ್ರಾಯವಿದೆ. ಇತರ ಭಾಷೆಗಳೂ ಸೂಕ್ತವಾಗಲಾರವೇ? – ಎಂಬ ಚರ್ಚೆ ಆಯಾಭಾಷೆಯ ವಿದ್ವಾಂಸರಿಗೆ ಸಂಬಂಧಪಟ್ಟದ್ದು. ಕನ್ನಡಿಗರು ಈ ಬಗ್ಗೆ ಯೋಚನೆ ಹರಿಸಬೇಕಾದ್ದು ಸೂಕ್ತವೆಂದು ಕಾಣುತ್ತದೆ. (ಕರ್ನೂಲಿನ ತೆಲುಗು ಪಂಡಿತ ಶ್ರೀ ಸದಾನಂದ ಶಾಸ್ತ್ರಿಯವರು ಕನ್ನಡದಲ್ಲೂ ಅಷ್ಟಾವಧಾನವನ್ನು ಮಾಡಿ ಹೆಸರಾದವರು ದತ್ತಾತ್ರೇಯಶರ್ಮರಿಂದ ಅವಧಾನದ ಸ್ಫೂರ್ತಿ ಪಡೆದ ಇವರು ಮೈಸೂರು, ಬೆಂಗಳೂರು, ಬಳ್ಳಾರಿ, ಚಿತ್ರದುರ್ಗ ಅನಂತಪುರಗಳಲ್ಲಿ ಅವಧಾನ ನಿರ್ವಹಿಸಿದ್ದಾರೆ.) ಅವಧಾನ ಯಾವ ಭಾಷೆಯಲ್ಲಿ ಬೇಕಾದರೂ ಆದೀತು ಇದರೆ ಈ ಬಗ್ಗೆ ಆಂಧ್ರದೇಶದ ವಿದ್ವಾಂಸರಿಗಿರುವಷ್ಟು ಆಸಕ್ತಿ ಬೇರಾವ ಪ್ರಾಂತ್ಯದವರಲ್ಲೂ ಕಂಡು ಬರುತ್ತಿಲ್ಲವೆಂಬುದಂತೂ ಸತ್ಯ ಸಂಗತಿ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಬರುವ ಕಂತಿ ಹಂಪನ ಸಮಸ್ಯೆಗಳು ಎಂಬ ವಿಚಾರ–ಅವಧಾನ ಕಲೆಗೆ ಸಂಬಂಧ ಪಟ್ಟಂತೆ ಕಾಣುತ್ತದೆ. ಕನ್ನಡದಲ್ಲಿ ಕಾಲಕ್ರಮೇಣ ಈ ಕಲೆ ಕ್ಷೀಣವಾದುದೇಕೆ ಎಂಬ ಪ್ರಶ್ನೆಗುತ್ತರ ಹುಡುಕುವುದು ಸ್ವಲ್ಪ ಕಷ್ಟ. ಆಸಕ್ತಿ ಕಡಿಮೆಯಾಗಿರಬಹುದು – ಪಾಂಡಿತ್ಯವೂ ಕಡಿಮೆ ಯಾಗಿರಬಹುದು–ಸಮೃದ್ಧ ಜೀವನ

(32ನೇ ಪುಟ ನೋಡಿ)

# ತಿ. ತಿ. ದೇವಸ್ಥಾನಗಳು, ತಿರುಪತಿ.
# ಪ್ರಕಟನ ಶಾಖೆ

## ಮಾರಾಟಕ್ಕೆ ಸಿದ್ಧವಾಗಿರುವ ಅಮೂಲ್ಯ ಧಾರ್ಮಿಕ ಗ್ರಂಥ ರಾಶಿ

**ಕನ್ನಡ :**

ಶ್ರೀನಿವಾಸನ ಹಾಡುಗಳು-ಭಾಗ-2 (ಶ್ರೀಪಾದರಾಜರು, ವ್ಯಾಸರಾಯರು, ವಾದಿರಾಜರು, ಕನಕದಾಸರು) 4–50

ಸೃಷ್ಟಿಪ್ರಕರಣ (ದಾಸಸಾಹಿತ್ಯದಲ್ಲಿ ವಿವರಿಸಿದಂತೆ) –ವಿ. ಬಾದರಾಯಣ ಮೂರ್ತಿ 12–50

ಪುರಂದರೋಪನಿಷತ್ (ಪುರಂದರದಾಸರ ಏಳುಕೃತಿ ವಿವರಣೆ) –ಬನ್ನಂಜೆ ಗೋವಿಂದಾಚಾರ್ಯ 7–00

ಕೇಶವಾದಿ ರೂಪಗಳು (ಕನ್ನಡ, ತೆಲುಗು, ಆಂಗ್ಲ, ಹಿಂದಿ, ಚಿತ್ರವಿವರಣೆ) –ಸಂ. ಕೆ. ಅಪ್ಪಣ್ಣಾಚಾರ್ಯ 3–75

ಕರ್ನಾಟಕ ಹರಿದಾಸರು(ಕನ್ನಡ, ತೆಲುಗು, ಆಂಗ್ಲ, ಹಿಂದಿ, ಚಿತ್ರವಿವರಣೆ) –ಸಂ. ಕೆ. ಅಪ್ಪಣ್ಣಾಚಾರ್ಯ 2–25

ಗೀತಾಸಾರೋದ್ಧಾರ –ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳು 4–00

ಸ್ತೋತ್ರ ಕುಸುಮಮಾಲಾ –ಸಂ. ವೆಂಕಟಾಚಲ 3–00

ಶ್ರೀ ವೆಂಕಟೇಶ್ವರ ಸುಪ್ರಭಾತ, ತ್ರಿವರ್ಣಚಿತ್ರ ವಿವರಣೆ 10–00

ಆಚಾರಗಳು ಆಡಂಬರಗಳು ––ಕೆ ಚಂದ್ರಮೌಳಿ 0–40

ಶ್ರೀ ವೆಂಕಟೇಶ್ವರ ಸುಪ್ರಭಾತ (ವಿವರಣೆ ತಾತ್ಪರ್ಯ) 0–50

" " (ಕನ್ನಡ ಲಿಪಿಯಲ್ಲಿ) 0–12

**ಮಕ್ಕಳಿಗಾಗಿ :**

ಶ್ರೀಪಾದರಾಜರು –ಎಂ. ಎಸ್. ಗುಂಡೂರಾವ್ 0–75

ಮಹಿಪತಿದಾಸರು –ಶಾನಭಾಗ 0–85

ಪ್ರಸನ್ನ ವೆಂಕಟದಾಸರು –ವಿ. ಬಾದರಾಯಣಮೂರ್ತಿ 0–80

ಗೋಪಾಲದಾಸರು –ರುಕ್ಮಿಣಿಗಿರಿಮಾಜಿ 0–75

**ಹಿಂದಿ :**

ಶ್ರೀ ವೆಂಕಟೇಶ್ವರ ಜೀ ಕೆ ಸುಪ್ರಭಾತ್ ಸ್ತೋತ್ರ –ಡಾ॥ ಎಂ. ಸಂಗಮೇಶಂ 0–20

ಶ್ರೀ ವೆಂಕಟೇಶ್ವರ ಸುಪ್ರಭಾತ್ (ಸಚಿತ್ರ) 11–00

ತೀರ್ಥರಾಜ ತಿರುಪತಿ ಡಾ॥ ಎಂ. ಸಂಗಮೇಶಂ 1–50

**ಸಂಸ್ಕೃತ :**

ಶ್ರೀ ವೇಂಕಟೇಶ್ವರ ಸುಪ್ರಭಾತಂ 0–12

ಶ್ರೀ ವೇಂಕಟೇಶ್ವರ ಅಷ್ಟೋತ್ತರ ಸಹಸ್ರನಾಮ ಸ್ತೋತ್ರಾಣಿ 0–62

ಕಠೋಪನಿಷತ್ –ಡಾ॥ ಕೆ.ಸಿ. ವರದಾಚಾರಿ ಹಾಗೂ ಡಾ॥ ಡಿ. ತಾತಾಚಾರ್ಯ 15–00

ಮಾರ್ಕಂಡೇಯ ಸಂಹಿತಾ 18–00

ತತ್ತ್ವಸಂಖ್ಯಾನಂ –ಆರ್. ರಾಮಮೂರ್ತಿ ಶರ್ಮಾ 2–00

ಬ್ರಹ್ಮಸೂತ್ರ ಭಾಷ್ಯ (ಭಾಗ–1) –ಆರ್. ರಾಮಮೂರ್ತಿ ಶರ್ಮಾ 30–00

ಅಲಂಕಾರ ಸಂಗ್ರಹ ಸಂ–ಕೆ ಭಾಸ್ಕರರಾವ್ 16–00

ಸೀತಾರಾಮಾಂಜನೇಯಂ –ಡಾ॥ ಡಿ. ಅರ್ಕಸೋಮಯಾಜಿ 50–00

ಪ್ರಶ್ನೋಪನಿಷತ್ 11–00

ಶ್ರೀಮತ್ ವೈಖಾನಸೇ ಭಗವಚ್ಛಾಸ್ತ್ರೇ ಕ್ರಿಯಾಧಿಕಾರಃ ಸಂ–ಡಾ॥ ಎಸ್.ಬಿ. ರಘುನಾಥಾಚಾರ್ಯ 25–00

1000 ರೂಗಳನ್ನು ಮೀರಿದ ಪುಸ್ತಕಗಳ ಕೊಳ್ಳುವಿಕೆಗೆ 30% ರಿಯಾಯಿತಿಯೂ, 500 ರೂಗಳಿಂದ1000 ರೂ॥ 25% ರಿಯಾಯಿತಿಯೂ 100 ರೂ ಗಳಿಂದ 500 ರೂ ವರೆಗೆ 15% ರಿಯಾಯಿತಿಯೂ ಉಂಟು. ಅಂಚೆವೆಚ್ಚ ಪ್ರತ್ಯೇಕ.

ಕೂಡಲೇ ಬರೆಯಿರಿ

**ಡೆಪ್ಯೂಟಿ ಎಕ್ಸಿಕ್ಯೂಟಿವ್ ಆಫೀಸರ್ (ಎಸ್**

ಸೇಲ್ಸ್‌ವಿಂಗ್ ಆಫ್ ಪಬ್ಲಿಕೇಷನ್ಸ್

ತಿ. ತಿ. ದೇ. ತಿರುಪತಿ

# ಕವಿ ರನ್ನನ
# ಉರಗ ಪತಾಕ

"ಭೋಗವೇ ಜೀವನ ಕರ್ಮ, ತ್ಯಾಗವೇ ಜೀವನ ಧರ್ಮ" – ಎಂಬುದು ಭಾರತೀಯ ಜೀವನದ ವೈಶಿಷ್ಟ್ಯ. ಈ ವೈಶಿಷ್ಟ್ಯವೇ ಭಾರತೀಯ ಸಾಹಿತ್ಯ, ಸಂಸ್ಕೃತಿ, ಕಲೆ ಇತ್ಯಾದಿಗಳಲ್ಲೂ ಒಡಮೂಡಿದೆ. ಅಂತೆಯೇ 'ರಾಮಾಯಣ' ಮಹಾಕಾವ್ಯ ತ್ಯಾಗದ ಪರಾಕಾಷ್ಠತೆಯನ್ನು ಸಾರಿದರೆ, ಮಹಾಭಾರತ ಮಹಾಕಾವ್ಯವು, ಕೇವಲ ಭೋಗಾಸಕ್ತರಾಗಿ (ರಾಜ್ಯಾಸಕ್ತರಾಗಿ) ಪರಸ್ಪರ ಕಚ್ಚಾಡಿದ ಸ್ವಾರ್ಥಿಗಳು ಹೊಂದಿದ ಅವನತಿಯನ್ನು ಎತ್ತಿ ಹಿಡಿಯುತ್ತದೆ. ಈ ಮಹಾಭಾರತ ಕಥೆಯನ್ನು ಕನ್ನಡಕ್ಕೆ ತಂದುಕೊಟ್ಟವರಲ್ಲಿ ರನ್ನನೂ ಒಬ್ಬ. ಅವನು ತನ್ನ ಕಥಾನಾಯಕನನ್ನಷ್ಟೇ ಅಲ್ಲದೆ ತನ್ನ ಕಥಾ ಪೋಷಣೆಗೆ ಪೂರಕವಾದ ಪ್ರತಿಯೊಂದು ಪಾತ್ರವನ್ನೂ ಸಮರ್ಥವಾದ ರೀತಿಯಲ್ಲಿ ಚಿತ್ರಿಸಿದ್ದಾನೆ. ಅಂತಹ ಪಾತ್ರಗಳಲ್ಲಿ ದುಷ್ಟ ಚತುಷ್ಟಯರಲ್ಲಿ ಒಬ್ಬನೆನಿಸಿದ್ದ ದುರ್ಯೋಧನನೂ ಒಬ್ಬ.

ಕವಿಯ ದೃಷ್ಟಿಯಲ್ಲಿ ಆತ 'ಉರಗಪತಾಕ', ಹಾವಿನಷ್ಟೆ ದ್ವೇಷವುಳ್ಳ, ಛಲವುಳ್ಳ ವ್ಯಕ್ತಿ ಅವನೆಂಬುದನ್ನು ಕವಿ ಸಾಂಕೇತಿಕವಾಗಿ ತಿಳಿಯಪಡಿಸಿದ್ದಾನೆ. ದುರ್ಯೋಧನನು ಎಲ್ಲರನ್ನೂ ತನ್ನಂತೆಯೇ, ತನ್ನಿಚ್ಛೆ ಹಾಗೂ ಛಲದಂತೆಯೇ ನಡೆಸಿಕೊಳ್ಳಲು ಬಯಸಿದಂತಹ ವ್ಯಕ್ತಿ. ಅವನ ಛಲ ಚಿಕ್ಕಂದಿನಿಂದಲೂ ಭೀಮಸೇನಾದಿಗಳನ್ನು ಹಿಂಸಿಸುವುದರಿಂದ ಆರಂಭಗೊಂಡು, ಅವರನ್ನು ಕಾಡುಪಾಲು ಮಾಡುವುದರಲ್ಲಿ ಪಕ್ವಗೊಂಡು ಯುದ್ಧದಲ್ಲಿ ತಾನು ಮಡಿಯುವವರೆಗೂ ಕಾಯ್ದುಕೊಂಡು ಬಂದಿತ್ತು. ಆದರಿಂದಲೇ ಆತನನ್ನು ಸುಯೋಧನ ಎಂಬುದಕ್ಕಿಂತಲೂ ದುರ್ಯೋಧನನೆಂದರೇನೇ ಸೂಕ್ತ. ಇಂತಹವನು ಕಾಲಾನುಕ್ರಮದಲ್ಲಿ ಎಲ್ಲರನ್ನೂ ಕಳೆದುಕೊಂಡು ಏನೂ ಇಲ್ಲದ, ಯಾರೂ ಇಲ್ಲದ ರಾಜ್ಯ ತನಗೇಕೆ 'ಎನ್ನವರಾದುದನಾಗದಿರ್ದಪೆನೆ' ಎಂಬ ವೈರಾಗ್ಯ ಹೊಂದುವಂತಹ ಸ್ಥಿತಿಗೆ ಬರುತ್ತಾನೆ.

ರನ್ನನ ಕುಂಚದಲ್ಲಿ ದುರ್ಯೋಧನನು ರೂಪುಗೊಳ್ಳುವುದು ಮೂರನೇ ಅಧ್ಯಾಯದಿಂದ. ಕವಿಯು ಇಲ್ಲಿ ದುರ್ಯೋಧನನಿಗೆ ವಿಶೇಷಣಗಳ ಒಂದು ಮಾಲೆಯನ್ನೇ ಹಾಕಿಬಿಟ್ಟಿದ್ದಾನೆ. ದುರ್ಯೋಧನನು "ಕುರುಕುಲ ಚೂಡಾಮಣಿಯುಂ, ಪನ್ನಗ ಪತಾಕನುಂ, ಕನಕಲತಾಲಾಂಛಿತೋತ್ತುಂಗ ಘನಗದಾಯುಧನುಂ, ಸಕಲ ಲಕ್ಷ್ಮೀನಿವಾಸನುಂ, ಸಮರಧೈರ್ಯನುಂ, ಮಹಾಶೌರ್ಯನುಂ, ರಾಧೇಯ ನಿಜಸಹಾಯನುಂ, ಛಲದಂಕಮಲ್ಲನುಂ, ಸಕಲ ಭೋಗ ಲಕ್ಷ್ಮೀಪತಿಯುಂ, ಅಭಿಮಾನಧನನುಮೆನಿಸಿದವನು". ಇದಿಷ್ಟರಿಂದಲೇ ಕವಿಗೆ ದುರ್ಯೋಧನ ಪಾತ್ರದ ಬಗ್ಗೆ ಇದ್ದ ಆದರಾಭಿಮಾನ ವ್ಯಕ್ತವಾಗುತ್ತದೆ. ಆದರೆ ಏನಾದರೇನು! ಇಂಥವನಿಗೂ ಚಿಂತೆ ತಪ್ಪಿದ್ದಲ್ಲ—ಅವನ ಈ ಚಿಂತೆಗೆ ಕಾರಣ ಮತ್ತಾವುದೂ ಅಲ್ಲ, ದುರ್ಯೋಧನನ ಶರೀರಕ್ಕೆ ಕ್ರಮವಾಗಿ ಕವಚ, ಭುಜರಕ್ಷೆ, ಹಾಗೂ ಶಿರಸ್ತ್ರಾಣವಾಗಿದ್ದ ದ್ರೋಣ, ಕರ್ಣ, ಭೀಷ್ಮಾದಿಗಳ ಬೆಂಬಲ ತಪ್ಪಿ ಹೋದದ್ದು. ಆದ್ದರಿಂದಲೇ ಭೀಮನು ಮೊದಲು ದುರ್ಯೋಧನನ ತಲೆ, ಭುಜಗಳು, ಹಾಗೂ ಎದೆಯ ಭಾಗಕ್ಕೆ ಕಣ್ಣು ಹಾಕದೆ ತೊಡೆಯ ಮೇಲೆ ತನ್ನ ದೃಷ್ಟಿ ಹಾಕಿದ್ದು ಎಂದು ಕವಿ ವಿಶೇಷ ಕಲ್ಪನೆ ಮಾಡಿದ್ದಾನೆ.

ದುರ್ಯೋಧನನು ಸಾಹಸಧನನೂ ಹೌದು. ಅವನು ಅಸಹಾಯಶೂರನು, 'ಕದನದೊಳರಿನೃಪರಂ ಕೋಪದೆ ಕೊಲ್ವೆನಗಂ ಸಹಾಯರೆಂಬರುಮೋಳರೇ" – ಎಂದು ಪರಾಕ್ರಮ ಮೆರೆಯಬಲ್ಲನು, ಅಂತೆಯೇ ಅವನು "ಒಂದೆ ಮೆಯ್ಯೊಳಾಂತಿರಿವೆನೆನ್ನ ಛಲಮಂ ಮೆರೆವೆಂ" ಎಂದು ಉದ್ಘೋಷಿಸುತ್ತಾನೆ. ಆದ್ದರಿಂದ ಪಾಂಡವರೊಡನೆ ಸಂಧಿಕೊಂಡಲು ಒಪ್ಪದೆ ಅವರ ಬಲ ಪರಾಕ್ರಮಾದಿಗಳನ್ನು ಹಂಗಿಸುತ್ತಾನೆ. ಹಟ ಹಿಡಿಯುತ್ತಾನೆ. ಅವನ ಈ ಹಟ ಸ್ವಭಾವಕ್ಕೆ ಜಿಗುಪ್ಸೆ ತೋರುತ್ತಿರುವನೇನೋ ಎಂಬಂತೆ ಕವಿಯು—

ಎನಿತೆನಿತಂ ಕಲಿಸಿದೊಡಂ
ತನಿತನಿತು ನಿಜಸ್ವಭಾವಮಕ್ಕುಂ ನೃಪನಂ
ದನನಂತುಮಂತು ಕರ್ಕಶ
ತನವಂತಃಶೂನ್ಯಮಕ್ಕು ಮುನ್ನತವಂಶಂ

ಎಂಬ ಮಾತನ್ನೇ ಹೇಳಿದ್ದಾನೆ.

ದುರ್ಯೋಧನನು ಹೇಗೆ ಸಾಹಸಧನನೋ ಹಾಗೆಯೇ ಬಂಧು ಪ್ರೇಮಿಯೂ ಹೌದು, ಸ್ನೇಹಶೀಲನೂ ಹೌದು. ಅವನು ಹೇಳುವ—

ಎನಗೆ ಮನದಿಂದು ಶೂನ್ಯಂ
ಮನೆಶೂನ್ಯಂ ಬೇಡ ಶೂನ್ಯಮಾದುದು
ಸಕಲಾ
ವನಿ ಶೂನ್ಯ ಮಾಯ್ತು ದುಶ್ಶಾ
ಸನನಿಲ್ಲದೆ ಕರ್ಣನಿಲ್ಲದಾನೆಂತಿರ್ಪೆಂ

ಎಂಬ ಅವನ ಮಾತುಗಳು ಕೇವಲ ತೋರಿಕೆಯ ಬೂಟಾಟಿಕೆಯ ಮಾತಾಗಿರದೆ ಅವನ ಹೃದಯದ ನೈಜಭಾವನೆಯನ್ನು ಸ್ಪಂದಿಸುತ್ತವೆ. ದುರ್ಯೋಧನನು ಉರಗ ಪತಾಕನಾದರೇನು? ಅವನೂ ಮಾನವನಲ್ಲನೆ! ಅಂತೆಯೇ ಅವನಲ್ಲೂ ಕವಿಯು ಒಬ್ಬ ಸಹೋದರ, ಗೆಳೆಯ ಹಾಗೂ ಒಬ್ಬ ಸತ್ಪುತ್ರನ ಎಲ್ಲಾ ಆವಶ್ಯ ಗುಣಗಳನ್ನು ಚಿತ್ರಿಸಿದ್ದಾನೆ.

ಬಾಂಧವರನಿರಿಸಿ, ಸರಸಿಜ
ಬಾಂಧವತನಯನುಮನೆನ್ನ ತಮ್ಮನುಮಂ ಸ
ಮ್ಬಂಧ ನರೇಂದ್ರನ ಮೊಗಮಂ
ಗಾಂಧಾರಿಯ ಮೊಗಮನಾವ ಮೊಗದೊಳೆ
ನೋಳ್ಪೆಂ

ಎಂಬ ಮಾತುಗಳು ದುರ್ಯೋಧನನ ವಿವೇಚನಾ ಶಕ್ತಿಯನ್ನು ಎತ್ತಿ ಹಿಡಿಯುತ್ತವೆ. ಆದರೂ ಅವನಿಗೆ ಒಂದು ರೀತಿಯ ಹಿಂಜರಿತ ಇದ್ದೇ ಇದೆ. ಹೀಗಾಗಿ ಅವನ ಮಾತಾಪಿತೃಗಳೇ ಅವನ ಮನಃಕ್ಷೋಭವನ್ನು ಅರಿಸಲೆಂದು ಅವನನ್ನು ಅರಸುತ್ತಾ ಬರುತ್ತಾರೆ. ಅವರ ಬಾಯಿಂದಲೂ ಕವಿಯು ದುರ್ಯೋಧನನ ದುರ್ದೈವವನ್ನು ಹೇಳಿಸಿದ್ದಾನೆ.

ಪಡೆ ಪನ್ನೊಂದಕ್ಷೋಹಿಣಿ
ಗೊಡೆಯನೆ ಮೂರ್ಧಾಭಿಷಿಕ್ತನಯ್
ಮೂರುಂ ಬೆ
ಳ್ಗೊಡೆಯ ನಡುವಿರ್ಪ ನೀನಿ
ರ್ದೆಡೆ ಯುಮುನೆಮಗರಿಯದಂತಟಾದುದೇ
ಮಗನೇ

—ಎನ್ನುವ ಅವರ ದುಃಖ ಎಂಥವರ ಕರುಳನ್ನೂ ಮಿಡಿಯುವಂಥದ್ದು.

ಅದೇ ಸಂದರ್ಭದಲ್ಲಿ ದುರ್ಯೋಧನನೂ ದುಃಖಿಸುವಂತಾಗುತ್ತದೆ. ಅವನ ಛಲದ ಪ್ರತಿಫಲವೆಂದರೆ 'ನಾಚಿಕೆ' ಮಾತ್ರವೇನೋ ಎನಿಸುತ್ತದೆ. ತನ್ನ ಮಾತಾಪಿತೃಗಳನ್ನು ಆನಂದದಿಂದ ಕಾಣುವೆನೆಂದಿದ್ದರೆ 'ವಿಧಾತ್ರ ದುಃಖಾತ್ಮರಂ ಶೋಕತಪ್ತರರಂ ಮೆಯ್ಯೊಳ್ ಬೀಳುವಶ್ರುಮುಖರಂ ಕಾಣ್ಬಂತಿಟಂ ಮಾಡಿದಯ್' ಎಂದು ಪಶ್ಚಾತ್ತಾಪದ ಜೊತೆಗೆ ತನ್ನ ಮಾತಾಪಿತೃಗಳು ನಿನ್ನ ಸಹೋದರರೆಲ್ಲಿ ಎಂದು ಕೇಳಿದರೆ "ಏನೆಂದು ಮರುಮಾತುಗುಡುವೆಂ ಕೊಂದರ್ ಕೌಂತೇಯರೆಂದು ಬನ್ನೈಸುವೆನೋ" ಎಂದು ಪೇಚಾಡುತ್ತಾನೆ. ಹೀಗೆ ಅವನ ಹಟಮಾರಿತನ ಕೆಲವೊಮ್ಮೆ ಅವನನ್ನು ಅಸಹಾಯಕನನ್ನಾಗಿಸಿ ಬಿಡುತ್ತದೆ. ಎಷ್ಟೇ

**ಭಾರ್ಗವಿಶ್ರೀ**

ಪೌರುಷ ಶಾಲಿಯಾದರೂ ಅವನಲ್ಲೂ ದುಃಖೋದ್ರೇಕ ಉಂಟಾಗದಿರುವುದೆ ! ಹೀಗಾಗಿ ದುಃಖಾತಿರೇಕದಿಂದ ಮೂರ್ಛಾವಸ್ಥೆಗೂ ಒಳಗಾಗಿ ಬಿಡುತ್ತಾನೆ. ಇದನ್ನು ಕಂಡ ತಾಯ್ತಂದೆಗಳು ಅವನು ಕಾಲವಶನಾದನೆಂದೇ ತಿಳಿದು ದುಃಖಿಸುತ್ತಿದ್ದಾಗ, ಸಂಜಯನ ಮಾತಿನಿಂದ ಸಮಾಧಾನಗೊಳ್ಳುತ್ತಾರೆ. ಹಾಗೂ ಮೂರ್ಛೆಯಿಂದ ಎಚ್ಚತ್ತ ಮಗನನ್ನ ಪಾಂಡವರೊಂದಿಗೆ ಸಂಧಿಮಾಡಿಕೊಳ್ಳುವಂತೆ ಅಂಗಲಾಚುತ್ತಾರೆ. ಆದರೆ ಇಲ್ಲಿಯೂ ದುರ್ಯೋಧನನು ಸೋಲನು. ಅವನ ಶೋಕ ಕೇವಲ ತಾತ್ಕಾಲಿಕವಾದದ್ದಷ್ಟೆ. ಅವನ ಹಟವೇ ಪುನಃ ತಲೆ ಎತ್ತುತ್ತದೆ.

ತನ್ನೊಡವುಟ್ಟಿದರ್ ಪೆಸರನಾಲ್ವರೊಳೊ
　　ರ್ವರುಮಿಲ್ಲದಿರ್ದೊಡಂ
ತನ್ನಸುವಂ ನಿವೇದಿಸುವನಗ್ನಿಗೆ ಧರ್ಮ
　　ತನೂಜನೆಂದೊಡಾ
ನೆನ್ನೊಡವುಟ್ಟಿದರ್ ಪೆಸರ ನೂರ್ವರೊಳೊ
　　ರ್ವರುಮಿಲ್ಲ ಬಾಳ್ವನೆಂ

ಎಂಬ ಆಕ್ಷೇಪಣೆಯೊಂದಿಗೆ, "ಬೆನ್ನಳಿಯಾಸೆಯಂ ಬಿಸುಡಿಮೆನ್ನ ಮರಾದುದನಾಗದಿರ್ದನೇ" ಎಂಬ ದೃಢ ನಿರ್ಧಾರವನ್ನೇ ತಾಳುತ್ತಾನೆ. ಕೊನೆಗೊಮ್ಮೆ ಅವನ ತಾಯ್ತಂದೆಗಳು ಅವನನ್ನು ಭೀಷ್ಮರ ಬಳಿಗೆ ಸಲಹೆ ಪಡೆಯಲು ಕಳುಹಿಸುತ್ತಾರೆ. ಆದರೆ ಅವನ ಆ ಪಯಣದ ರೀತಿ ಮನವನ್ನು ಕಲಕುವಂಥದ್ದಾಗಿದೆ. ಕುರುಭೂಮಿಯಲ್ಲಿ ಆ 'ಕುರುಕುಲ ತಿಲಕಂ ಕುಸಿ ಕುಸಿದು ಮೆಲ್ಲ ಮೆಲ್ಲನೆ ನಡೆದಂ' ಎಂದು ಕವಿಯು ಹೇಳಿರುವ ಮಾತು ದುರ್ಯೋಧನನ ಬಲಹೀನತೆಯನ್ನು ಮನದಟ್ಟು ಮಾಡಿಕೊಡುತ್ತದೆ. ಅವನ ಈ ದುಃಸ್ಥಿತಿ ಸಂಜಯನನ್ನು ನೋಯಿಸಿ 'ವಿಧಾತೃವಶದಿಂ ನಿಮಗಂ ನಡೆವಂತುಟಾದುದೇ' ಎಂದು ಅವನು ಹಲುಬಿದಾಗ 'ಅಭಿಮಾನಧನ'ನಾದ ದುರ್ಯೋಧನನೇ ಅವನನ್ನು ಕುರಿತು–

ತನುಜಾನುಜರ ವಿಯೋಗದ
ಮನಃಕ್ಷತಂ ನೋಯಿಸಲ್ಕೆ ನೆರೆಯವು ಸಮರಾ
ವನಿಯೊಳುಡಿದಿರ್ದ ಕಯ್ದುಗ
ಳಿನಿಸುಂ ನೋಯಿಕುಮೆ ವಜ್ರಮನನಪ್ಪೆನ್ನಂ

ಎಂದು ಸಮಾಧಾನಪಡಿಸುವ ಯತ್ನ ಮಾಡುತ್ತಾನೆ. ಅದರೊಂದಿಗೆ 'ನೋಯಿಕುಮೆ ವಜ್ರಮನನಪ್ಪೆನ್ನಂ' ಎಂಬ ಮಾತಿನಿಂದ ತನ್ನ ತಾನೇ ನಿಂದಿಸಿಕೊಳ್ಳುತ್ತಿರುವುದನ್ನೂ ಸಾವಿ ಕಾಣಬಹುದು. ಹಾಗೆ ನಡೆಯುವಾಗ ಅವ ಒಂದು ಪಿಶಾಚಿಯು ಅವಹೇಳನ ಕು ತುತ್ತಾಗ ಬೇಕಾಗುತ್ತದೆ. ಆದರೆ ಅವನು 'ಮಹಾಸತ್ತ್ವ'ನಾದ್ದರಿಂದ ಅದನ್ನೇನೂ ಲಕ್ಷಿಸನು, ಮುಂ ಬರುವಾಗ ದ್ರೋಣರ ಶವವನ್ನು ಎದುರ್ಗೊ ತ್ತಾನೆ. ಹಿಂದೆ ಕೋಪದಿಂದ ಇದೇ ದ್ರೋ ರನ್ನು "ಕಲಿಯಂ ಪೊರೆದೊಡೆ ಕೂರ್ಪಂತೋರ್ಪ ತಿರೆ ತೋರ್ಕುಮೆ ಪಂದೆ ಪತಿಗೆ ಸಂಗರದ ಯೊಳ್" ಎಂದು ಝುಂಕಿಸಿ ನುಡಿದಿದ್ದನು. ಆ ಅವರ ಸ್ಥಿತಿಯನ್ನು ರಣರಂಗದಲ್ಲಿ ಪ್ರತ್ಯಕ್ಷವಾ ಕಂಡಾಗ "ನಿಮ್ಮೊಡನೆ ಕಾದಿ ಗೆಲಲ್ಕದು ನಿಮ ಪೇಕ್ಷೆಯೆಂದರಿಯೆನಿದೆನ್ನ ಕರ್ಮವಶವೆಂದರಿಯೆ ನಿಮಗೆಂತು ಸಾವುಮೀತೆರದಿನಕಾರಣಂ ನೆರೆ ಸಂಭವಿಸಿದುದೋ" ಎಂದು ದುಃಖಪಡುವುದಲ್ಲ "ಶರಸಂದೋಹಮನಸ್ತ್ರ ಸೈನ್ಯದೊಡಲೊಳ ಬಿಲ್ಬಲ್ಮೆಯಂ ನಿಜ ಶಿಷ್ಯರ ಮೈಯೊಳ್, ನಿ ಕೀರ್ತಿಯಂ ನಿಖಿಳ ದಿಕ್ಚಕ್ರಂಗಳೊಳ್, ಚಿತ್ತಮ ಹರಪಾದಾಂಬುಜ ಯುಗ್ಮದೊಳ್ ನಿರಿಸಿದಂ ಇಂತಹವನಿಗೆ ಇಂಥ ಸಾವು ಹೇಗೆ ಬಂದಿತೋ ಎಂದು ಶೋಕ ಹೊಂದಿ ಅವರಿ ಪ್ರದಕ್ಷಿಣೆ ನಮಸ್ಕಾರ ಹಾಕಿ ಗೌರವಿಸುವಂತ ವೈಶಾಲ್ಯವನ್ನು ತೋರುತ್ತಾನೆ. ಮುಂದೆ ಅವ ಕಣ್ಣಿಗೆ ತನ್ನ ವೈರಿಯ ಮಗ ಅಭಿಮನ್ಯುವಿ ಮೃತಶರೀರ ಕಣ್ಣಿಗೆ ಬೀಳುತ್ತದೆ.

ಅಸಮಬಲ, ಭವದ್ವಿಕ್ರಮ
ಮಸಂಭವಂ ಪೆರರ್ಗೆ, ನಿನ್ನ ನಾನಿತಂ ಪ್ರಾ
ರ್ಥಿಸುವೆನಭಿಮನ್ಯು ನಿಜಸಾ
ಹಸೈಕ ದೇಶಾನುಮರಣಮೆಮಗಕ್ಕೆ ಗಡಾ

ಎಂದು ಮನದಲ್ಲಿಯೇ ಆ ಚಿಕ್ಕಬಾಲಕನಿಗೆ ಮುಗಿಯುತ್ತಾನೆ. ಇಲ್ಲಿ ನಾವು ದುರ್ಯೋಧನ ಹೃದಯ ವೈಶಾಲ್ಯತೆಯನ್ನು ಕಾಣಬಹುದ ಗುಣಕ್ಕೆ ಮಾತ್ಸರ್ಯ ಮುಂಟೆ!

ಇನ್ನೂ ಮುಂದೆ ಹೋದಾಗ ಸ್ವತಃ ತ ಮಗನ ಶವವನ್ನು ಕಾಣಬೇಕಾದ ದಾರುಣ ಸ್ಥಿ ಬಂದಾಗ–

ಗಳಿತ ಶರಮಾಯ್ತು ಹಸ್ತಂ
ಗಳಿತ ರಣೋತ್ಸಾಹಮಾಯ್ತು ಹೃದಯಂ
　　ನಯನ
ಗಳಿತಾಶ್ರುವಾಯ್ತು ಕೌರವ
ಕುಳ ತಿಲಕಂಗೆ

ಎಂಬ ಕವಿಯ ಮಾತು ದುರ್ಯೋಧನನಲ್ಲಿದ್ದ ಪು ಸ್ನೇಹಕಾತರತೆಯನ್ನು ಪರಿಚಯಿಸುತ್ತದೆ. ಅವ

ಮಗನ ಶವವನ್ನು ನಿಂತು ಕಣ್ತುಂಬ ನೋಡುವ ಸಮಾಧಾನವೂ ಅವನಿಗಿಲ್ಲ. ಮುಂದೆ ಶಲ್ಯಾದಿ ರಾಜರುಗಳು ಮಡಿದು ಬಿದ್ದುದನ್ನು ಕಂಡು "ಎನ್ನಯಕಾರಣದಿಂದೀ ನೃಪಸುತರ್ಕಳಳ್ಕಾಡಿದರೇ" ಎಂದು ಪೇಚಾಡುತ್ತಾನೆ, ವ್ಯಥೆ ಪಡುತ್ತಾನೆ. ಮುಂದೆ ದುಶ್ಯಾಸನನ ಕರ್ಣನ, ಕಳೇಬರವನ್ನು ಕಂಡು:—

ನಿನ್ನಂ ಕೊಂದ ಕಿರೀಟಿಯು
ಮೆನ್ನಣುಗನನಿಕ್ಕಿ ಕೊಂದ ಭೀಮನುಮೊಳರಾ
ನಿನ್ನು ಮೊಳಂ ಗಡ ಸಾಲದೆ
ನಿನ್ನಯ ಕೂರ್ಮೆಗಮದೆನ್ನ ಸೌಧರ್ಮಿಕೆಗಂ

ಎಂಬ ಸ್ವಭರ್ತ್ಸನೆಯಲ್ಲಿ ತೊಡಗುತ್ತಾನೆ. ಆದರೆ ಎಲ್ಲರಿಗಿಂತಲೂ ಮಿಗಿಲಾಗಿ ಅತನು ದುಃಖಿಸುವುದು ತನ್ನ ಪ್ರಿಯಸಖನಾದ ಕರ್ಣನಿಗಾಗಿ. ಅದಕ್ಕೆ ಕಾರಣ ಕರ್ಣನಿದ್ದ ನಾಡಲ್ಲಿ ಅನೃತ, ಲೋಭ ಭಯನೆಂಬುವು, ಇರಲಾರವು, ಸತ್ಯ, ತ್ಯಾಗ, ಪರಾಕ್ರಮಕ್ಕೆ ಕರ್ಣನೇ ಮೊಟ್ಟಮೊದಲಿಗನು ಎಂಬ ವಿಶ್ವಾಸ ದುರ್ಯೋಧನನದು. ಅದ್ದರಿಂದ ಅವನು ಕರ್ಣನನ್ನು ಕುರಿತು—

ನೀನುಳ್ಳೊಡುಂಟು ರಾಜ್ಯಂ
ನೀನುಳ್ಳೊಡೆ ಪಟ್ಟಮುಂಟು ಬೆಳ್ಗೊಡೆಯುಂ
ಟಯ್
ನೀನುಳ್ಳೊಡುಂಟು ಪೀಳಿಗೆ
ನೀನಿಲ್ಲದಿವೆಲ್ಲಮೊಳವೆ ಅಂಗಾಧಿಪತೀ

ಎಂದು ಅವನನ್ನು ಪ್ರಶಂಸಿಸುವನು. ಈ ಹಿನ್ನೆಲೆಯಲ್ಲಿ ಸಂಧಿಗೆ ಅವನನ್ನು ಒಡಂಬಡಿಸಲು ಭೀಷ್ಮರು ಪ್ರಯತ್ನಿಸುವರು. ಅದರಲ್ಲಿ ಅವರು ವಿಫಲರಾಗುವರೆಂದು ಪ್ರತ್ಯೇಕವಾಗಿ ಹೇಳಬೇಕೆ!

ನೆಲಕಿರಿವೆನೆಂದು ಬಗೆವಿರೆ
ಜಲಕಿರಿವೆಂ,ಪಾಂಡುಸುತರೊಳೇ ನೆಲನಿದು ಪಾ
ಳ್ಳಿಲನೆನಗೆ, ದಿನಪಸುತನಂ
ಕೊಲಿಸಿದ ನೆಲನೊಡನೆ ಮತ್ತೆ ಪುದು
ವಾಳ್ದಪನೇ

ಎಂಬ ದೃಢ ನಿರ್ಧಾರವನ್ನು ದುರ್ಯೋಧನ ವ್ಯಕ್ತಪಡಿಸುತ್ತಾನೆ.

ದಿನಕರತನಯನ ದುಶ್ಶಾ
ಸನನ ವಿಯೋಗದೊಳಮಿನಿತುವರೆಗಂ ನೋವಿ
ಲ್ಲೆನಗಹಿತರೊಡನೆ ಪುದುವಾ
ಳೆನೆ ನೊಂದೆಂ ಸ್ವಜನಗುರುಜನಾ
ಭ್ಯರ್ಥನೆಯಿಂ

ಎಂಬ ಮಾತು ಇದಕ್ಕೊಂದು ಉತ್ತಮ ನಿದರ್ಶನ. ಇನ್ನೂ ಮುಂದುವರೆದು ಅವನು ಹೇಳುವ ಸಂಧಿ ಮಾಡಿಕೋ ಎಂದು ಹೇಳುವವರ "ನುಡಿಯುಂ ಕೇಳಲ್ಕೆಂದೆರಡುಂ ಕಿವಿಗಳುಮನೆನಗೆ ಬಿದಿ ಮಾಡಿದನೇ" ಎಂಬ ಮಾತು ಅವನು ಸಂಧಿಯ ಬಗ್ಗೆ ಎಂಥ ಜಿಗುಪ್ಸೆ ಹೊಂದಿದ್ದನೆಂಬುದನ್ನು ಸಮರ್ಥವಾಗಿ ಪರಿಚಯಿಸುತ್ತದೆ. ಮುಂದೆ ದುರ್ಯೋಧನನು ಭೀಷ್ಮರ ಸಲಹೆಯಂತೆ ವೈಶಂಪಾಯನ ಸರೋವರದಲ್ಲಿ ಕಾಲಕ್ಷೇಪ ಮಾಡುವ ಉದ್ದೇಶದಿಂದ ಅಡಗಿಕೊಳ್ಳಲು ಬರುತ್ತಾನೆ. ಆದರೆ ಸರೋವರದಿಂದ ಹೊರಬಂದವನಂತೆ ಹಿಂದು ಮುಂದಾಗಿ ಸರೋವರವನ್ನು ಪ್ರವೇಶಿಸುತ್ತಾನೆ. ಆಗ ಛೀ ಎಂದು ರಾಜ್ಯಲಕ್ಷ್ಮಿಯು ಅವನ ಬಗ್ಗೆ ಹೇಸಿ ಅವನನ್ನು ಬಿಟ್ಟು ಹೋದಳಂತೆ ಅಲ್ಲದೆ ಕವಿಗೇ ಇದು ಅವಲಕ್ಷಣದ ಸಂಕೇತವೆಂಬಂತೆ ಕಂಡು ಬಂದು—

ತುರುವಂ ಕಳಿಸುವ, ಕೃಷ್ಣೆಯ
ನಿರಿಯಂ ಪಿಡಿದುರ್ಚಮೇಳ್ವ ಕೊಳನಂ ಪಿಂದು
ಪೆರಗಾಗಿ ಪುಗುವ ದುರ್ನಯ
ಮುರಿಪವೆ ಕೌರವನ ರಾಜ್ಯದಾಯದ ಕೇಡಂ—

ಎಂಬ ತೀರ್ಮಾನವನ್ನೇ ಮಾಡಿ ಬಿಟ್ಟಿದ್ದಾನೆ. ಆದರೂ ಕವಿಗೆ ದುರ್ಯೋಧನನ ಬಗ್ಗೆ ಅಭಿಮಾನ ಕಡಿಮೆಯಾಗದು. ನೀರೊಳಗಿದ್ದ ದುರ್ಯೋಧನನು, 'ಪರಮಯೋಗಿಯವೊಲ್ ಮಂತ್ರ ಪದಾಕ್ಷರಗಳಂ ಮಿನುಗುತುಮಿರ್ದಂ'—ಎಂದೇ ಕವಿಯು ಮೆಚ್ಚುಗೆಯಾಡುತ್ತಾನೆ. ಇವನನ್ನು ಹುಡುಕಿಬಂದ ಪಾಂಡವರು ಒಬ್ಬೊಬ್ಬರೂ ಒಂದೊಂದರಂತೆ ಅವಹೇಳನದ ಮಾತಾಡುತ್ತಾರೆ. ಅವನ ಕೋಪ ಮೇರೆ ಮೀರಿ, ಅವನ ಕಣ್ಣೆಲ್ಲವೂ ರಕ್ತಮಯವೆಂಬಂತಾಗುತ್ತದೆ. ಎಷ್ಟಾದರೂ ಸ್ವಾಭಿಮಾನಿಯಾದ ದುರ್ಯೋಧನನು ಸುಮ್ಮನಿರಲಾಗುವುದೇ, ಅವನ ಪೌರುಷ ಅವನನ್ನು ಹೇಡಿಯಾಗಿರಲು ಬಿಡುವುದೇ! ಹೀಗಾಗಿ ಕೋಪ ಹಾಗೂ ಪರಾಕ್ರಮದಿಂದ 'ಆ ನೀರೊಳಗಿರ್ದುಂ ಬೆಮರ್ತನುರಗಪತಾಕಂ', ಇದೊಂದೇ ಮಾತು ಸಾಕು. ದುರ್ಯೋಧನನ ವ್ಯಕ್ತಿತ್ವಕ್ಕೆ ಮೆರುಗನ್ನೀಯಲು. ಸೈನ್ಯಬಲ ಕಡಿಮೆಯಾಗಿದ್ದರೂ, ಭುಜಬಲಕಡಿಮೆಯಾಗಿಲ್ಲ. ಅಲ್ಲದೆ ಅವನು 'ಸಾಹಸಗರ್ವಾಲಂಕೃತ' ನಾದ್ದರಿಂದ ಹೆದರುವ ಅವಶ್ಯಕತೆ ಏನೂ ಇಲ್ಲ ಅದರೊಂದಿಗೆ 'ನೇರ್ಪಿಂಗೆ ನೇರ್ಪುಗೊಳ್ಳದೇ, ಅವನ ಉದ್ದೇಶವಿರುವಾಗ ಯುದ್ಧಕ್ಕೆ ಹೆದರುವನೆ. ಹೀಗಾಗಿ ಭೀಮ ದುರ್ಯೋಧನರಿಗೆ ಯುದ್ಧ ಸಮಗಟ್ಟುತ್ತದೆ. 'ಸಮರಜಯಂ ದೈವಾಯತ್ತಂ, ಪುರುಷಕಾರಮೆಮ್ಮಗಾಯ್ತು' ಎಂದು ತಿಳಿದಿದ್ದ ದುರ್ಯೋಧನ ಯುದ್ಧಕ್ಕೆ ತೊಡಗಿಯೇ ಬಿಟ್ಟನು. ಆದರೆ ಭೀಮನಿಗಿಂತಲೂ ಬಲದಲ್ಲಿ ಮಾತ್ರವಲ್ಲದೆ ಯುದ್ಧ ಕೌಶಲ್ಯದಲ್ಲಿಯೂ ಪರಿಣತನಾಗಿದ್ದರೂ ಕೂಡ ಅವನ ಅಮಾಯಕತೆಯ ದೆಸೆಯಿಂದ ಭೀಮನ ಭೀಮಗದೆಯು ಅವನ ತೊಡೆಮುರಿದಾಗ 'ನೆಲನನ್ ಅಂತ್ ಇದನೆಂತುಂ ಬಿಡೆನೆಂಬ ತೆರದೆ' ಕೌರವೇಂದ್ರನು ನೆಲಕ್ಕೆ ಉರುಳಿಬಿದ್ದನು. ಅಲ್ಲಿಗೂ ಅವನ ಛಲ ಅಳಿಯದು. ತನ್ನನ್ನು ಹುಡುಕಿಬಂದ ಅಶ್ವತ್ಥಾಮನೊಂದಿಗೆ, ಕುಟುಕು ಜೀವ ಹಿಡಿದಿದ್ದ ದುರ್ಯೋಧನನು ಹೇಳುವ—

ಹತದೇಹ ಹತಭುಜದ್ವಯ
ಹತೋರು, ಹತಜೀವ, ಹತಕಿರೀಟಂ,
ಹತಹೃತ್
ಪ್ರತೀಕಾರಂ, ಎಂಬುದುಂಟೇ
ಗತಿಯಂ ಸಾಧಿಸುವುದಲ್ತೆ ತಾಂ ಪ್ರತಿಕಾರಂ-

ಎಂಬ ಮಾತುಗಲಲ್ಲಿ, ದುರ್ಯೋಧನನಲ್ಲಿ ನಿಜಕ್ಕೂ ಎಂತಹ ವೈರಾಗ್ಯವೇ ಮೂಡಿ ಬಂದಿದೆ ಎಂಬ ಆಶ್ಚರ್ಯವಾಗುತ್ತದೆ. ಆದರೆ ಅದು ಕೇವಲ ಕ್ಷಣಿಕ. ಅವನ ಛಲವೇ ಪುನಃ ತಲೆ ಎತ್ತಿ ನಿಂತು; ಪಾಂಡವರೈವರ ತಲೆಯನ್ನು ಕಡಿದು ಇನ್ನೂ ರಕ್ತವು ತೊಟ್ಟಿಕ್ಕುತ್ತಿರುವಂತೆಯೇ ನನಗೆ ತಂದು ತೋರಿಸು, ಅದನ್ನು ನೋಡಿಯಾದರೂ ನಿಶ್ಚಿಂತನಾಗಿ ಪ್ರಾಣಬಿಡುತ್ತೇನೆ ಎಂದು ಹೇಳುತ್ತಾನೆ. ಆದರೆ ಗುರುನಂದನನು ಕತ್ತಲಿನ ಸಮಯದಲ್ಲಿ, ಅರಿಯದವನಾಗಿ ಪಾಂಡವರ ಮಕ್ಕಳ ತಲೆಗಳನ್ನು ಕಡಿದು ತಂದು ದುರ್ಯೋಧನನಿಗೆ ತೋರಿಸುತ್ತಾನೆ. ಈ ಸಂದರ್ಭದಲ್ಲಿ ಕವಿಯು ದುರ್ಯೋಧನನನ್ನು ಮಹಾನುಭಾವನೆಂದೇ ಕರೆದಿದ್ದಾನೆ. ಅವನು ಆ ತಲೆಗಳನ್ನು ದೀರ್ಘವಾಗಿ ಗಮನಿಸಿ ನೋಡಿ ಹೇಳುವ ಮಾತಿನಲ್ಲಿಯೂ ಅವನಿಗೂ ಭೀಮನಿಗೂ ಇದ್ದ ದ್ವೇಷವು ಪುನಃ ಎದ್ದು ಕಾಣುತ್ತದೆ.

ಪವನಜನಾಸ್ಯಮುಲ್ತಿದವನಾನನ
ಮಪ್ಪೊಡೆ ಮುಟ್ಟಮಿರ್ದು ನೋ
ಡುವುದೆ ಮದೀಯ ವಕ್ತ್ರಮನೆ—

ಅಯ್ಯೋ ವಿಚಾರಮಾಡದೆ ಇಂತಹ ಕಾರ್ಯ ಮಾಡುವರೇ. ನಿನಗೆ ಶಿಶು ಹತ್ಯಾದೋಷವೊದಗಿತು ಅಷ್ಟೇ ಹೊರತು ಏನೂ ಪ್ರಯೋಜನವಾಗಲಿಲ್ಲ ಎನ್ನುತ್ತಾನೆ. ಮತ್ತು ಅಶ್ವತ್ಥಾಮನನ್ನು ಪ್ರಾಯಶ್ಚಿತ್ತಕ್ಕಾಗಿ ಹಿಮಾಲಯಕ್ಕೆ ತೆರಳುವಂತೆ, ಸಮಾಧಾನಪಡಿಸಿ, ದೇವರನ್ನು ನೆನೆಯುತ್ತಾ ಪ್ರಾಣ ವಿಸರ್ಜಿಸಲು ಬಯಸಿ, ಕಮಲಗಳೊಂದಿಗೆ ತನ್ನ ಮಿತ್ರರ ಮುಖಕಮಲಗಳು ಮುದುಡುತ್ತಿರಲು, ಸೂರ್ಯನ ತೇಜಸ್ಸಿನೊಂದಿಗೆ ತನ್ನ ತೇಜಸ್ಸು ಅಳಿಯುತ್ತಿರಲು, ಸೂರ್ಯನ ಕಿರಣದೊಂದಿಗೆ ತನ್ನ ಕೈಗಳು ಮುದುಡಿಕೊಳ್ಳುತ್ತಿರಲು, ಚಕ್ರವಾಕ

(26ನೇ ಪುಟ ನೋಡಿ)

ತಿರುಮಲೆ ತಿರುಪತಿ ದೇವಸ್ಥಾನಗಳು

# ತಿರುಮಲೆಯಲ್ಲಿ ವಸತಿಗಾಗಿ ದಾನಯೋಜನೆ

ಕಲಿಯುಗ ವೈಕುಂಠವೆಂದು ಹೆಸರಾದ ತಿರುಮಲೆ ಶ್ರೀ ವೆಂಕಟೇಶ್ವರನ ಆವಾಸಸ್ಥಳ. ಇಲ್ಲಿಗೆ ಸಹಸ್ರಾರು ಮಂದಿ ಯಾತ್ರಿಕರು ಪ್ರತಿದಿನವೂ ಬರುತ್ತಾರೆ. ಅನುದಿನವೂ ಹೆಚ್ಚುತ್ತಿರುವ ಯಾತ್ರಿಕರ ವಸತಿ ಸೌಕರ್ಯಗಳಿಗಾಗಿ ತಿ. ತಿ. ದೇ. ಗಳು ದಾನಯೋಜನೆಯಲ್ಲಿ ಕಾಟೇಜುಗಳು, ಸತ್ರಗಳು, ಅತಿಥಿಗೃಹಗಳನ್ನು ನಿರ್ಮಿಸುತ್ತಿದೆ. ವಿವಿಧ ಯೋಜನೆಗಳ ವಿವರಗಳು ಈ ರೀತಿ ಇವೆ.

## ರಾಮಬಗೀಚಾ ಅತಿಥಿಗೃಹ

ಈ ಅತಿಥಿಗೃಹವನ್ನು ದೇವಾಲಯದ ಈಶಾನ್ಯ ಭಾಗದಲ್ಲಿ ನಿರ್ಮಿಸಲಾಗುವುದು.

* ಇದು ಪ್ರತಿಯೊಂದರಲ್ಲೂ 50 ಸೂಟ್‌ಗಳಿರುವ ಮೂರು ಅಂತಸ್ತುಗಳನ್ನು ಹೊಂದಿದ್ದು, ಪ್ರತಿ ಸೂಟ್ 14'×18' ಗಳದ್ದಾಗಿ, ಸುಮಾರು 600 ಚದರಡಿ ಪ್ಲಿಂತ್ ಏರಿಯಾದಲ್ಲಿ ಸಾಮಾನ್ಯ ಅಂಗಳವನ್ನು ಹೊಂದಿರುತ್ತದೆ.
* ದಾನಿಗಳು ಒಂದು ಸೂಟ್ ನಿರ್ಮಾಣಕ್ಕೆ ರೂ 60,000 ನೀಡಬೇಕಾಗುವುದು.

## ಸಪ್ತಗಿರಿ ಧರ್ಮಶಾಲೆ

8.5 ಕೋಟಿ ರೂಗಳ ವೆಚ್ಚದ ಈ ಭಾರೀ ಯೋಜನೆಯನ್ನು ಸಪ್ತಗಿರಿ ಸತ್ರಗಳ ನಿರ್ಮಾಣಕ್ಕಾಗಿ ತಿ.ತಿ.ದೇ. ಕೈಗೊಂಡಿದೆ. ಪ್ರತಿ ಸೂಟ್‌ನ ನಿರ್ಮಾಣ ವೆಚ್ಚ 80000 ರೂಗಳು

ದಾನಿಗಳು 40,000 ರೂಗಳನ್ನು ತಮ್ಮ ಹೆಸರಿನ ಒಂದು ಸೂಟ್‌ಗಾಗಿ ನೀಡಬೇಕಾಗುವುದು.

ಎ. ಟಿ. ಸಿ. ಕಾಟೇಜುಗಳು ಹಾಗೂ ಎಂ. ಬಿ. ಸಿ. ಕಾಟೇಜುಗಳಲ್ಲಿನ ಮೇಲಂತಸ್ತು ಕೋಣೆಗಳಿಗೂ ಇದೇ ರೀತಿ ದಾನಗಳನ್ನು ನೀಡಬಹುದು.

## ದಾನಿಗಳಿಗೆ ಪ್ರತಿಫಲ

* ದಾನಿಗಳಿಗೆ ತಮ್ಮ ದಾನದ ಪ್ರತಿಯಾಗಿ ವರ್ಷಕ್ಕೆ 60 ದಿನಗಳ ಕಾಲ ತಿರುಮಲೆಯಲ್ಲಿ ಉಚಿತ ವಸತಿ ದೊರೆಯುವುದು.
* ಕಂಪನಿಗಳಿಗೂ, ಸಂಸ್ಥೆಗಳಿಗೂ ಈ ಸೌಲಭ್ಯ 15 ವರ್ಷಕ್ಕೆ ಮಾತ್ರ ಸೀಮಿತ
* ದಾನಿಗಳ ಬಂಧುಗಳಿಗೆ ವಸತಿ ನೀಡುವಲ್ಲಿ ಆದ್ಯತೆ, ನೀಡಲಾಗುವುದು.
* ಪ್ರತಿ ಕಾಟೇಜು/ಸೂಟ್ ನ ಹೊರಗೆ ದಾನಿಗಳ ಹೆಸರನ್ನು ಕೆತ್ತಲಾಗುವುದು.

ತಿ ತಿ.ದೇ. ಕಾರ್ಯನಿರ್ವಹಣಾಧಿಕಾರಿಯವರ ಹೆಸರಿನಲ್ಲಿ ಪಡೆದ ಡಿ.ಡಿ. ಯನ್ನು ತಿರುಮಲೆಯ ಎಕ್ಸಿಕ್ಯೂಟಿವ್ ಇಂಜನಿಯರ್–V ಇವರಿಗೆ ಕಳುಹಿಸಿ.

**ತುಸು ಧನವನ್ನು ವಿನಿಯೋಗಿಸಿ, ಪುಣ್ಯಫಲವನ್ನು ಪಡೆಯಿರಿ**

ಮಿಕ್ಕ ವಿವರಗಳನ್ನು ಪಡೆಯಬಹುದಾದ ವಿಳಾಸ :

**ಕಾರ್ಯನಿರ್ವಹಣಾಧಿಕಾರಿ**
**ತಿ.ತಿ. ದೇವಸ್ಥಾನಗಳು**
**ತಿರುಪತಿ–೫೧೭೫೦೧ ಆಂಧ್ರಪ್ರದೇಶ.**

**ಕಾರ್ಯನಿರ್ವಹಣಾಧಿಕಾರಿ**

# ಜನತೆಯ ಕವಿ ಸರ್ವಜ್ಞ

ಶ್ರೀ ಸಿ.ನಂ. ಕೃಷ್ಣಮೂರ್ತಿ

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ವಚನಗಳು ಸಾಹಿತ್ಯ ಪ್ರಕಾರವಾಗಿ ಬೆಳೆದು ಬಂದು ತನ್ನದೇ ಆದ ಸ್ಥಾನವನ್ನು ಉಳಿಸಿಕೊಂಡಿದೆ. ವಚನ ಸಾಹಿತ್ಯ ಸೃಷ್ಟಿಗೆ ಅಂದಿನ ಸಾಮಾಜಿಕ ಸ್ಥಿತಿಯೇ ಕಾರಣವಾಗಿದ್ದು ಶರಣರು ಜನ ಸಾಮಾನ್ಯರನ್ನು ದೃಷ್ಟಿಯಲ್ಲಿಟ್ಟುಕೊಂಡು ವಚನಗಳನ್ನು ರಚಿಸಿದರು. ಭಕ್ತಿ, ಜ್ಞಾನ, ವೈರಾಗ್ಯಪರವಾದ ವಿಚಾರಗಳು ಸರಳವಾಗಿ ಜನಮನವನ್ನು ತಲುಪಬೇಕು. ಅವುಗಳ ಜೊತೆಯಲ್ಲಿ ಜನ ಜೀವನದಲ್ಲಿರುವ ಲೋಪ ದೋಷಗಳು ಅವರಿಗೆ ಮನವರಿಕೆಯಾಗಿ ಅವುಗಳನ್ನು ತಿದ್ದಿಕೊಂಡು ತಮ್ಮ ಬದುಕನ್ನು ಹಸನಾಗಿಸಿಕೊಳ್ಳಬೇಕೆಂಬುದು ಅವರ ಉದ್ದೇಶವಾಗಿತ್ತು. ಈ ದೃಷ್ಟಿಯಿಂದ ಸರ್ವಜ್ಞನಿಗೆ ಜನತೆಯ ಕವಿ ಎಂಬ ಬಿರುದು ಸಾರ್ಥಕವಾಗುತ್ತದೆ. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಮಾರ್ಗ ಕಾವ್ಯಗಳನ್ನ ರಚಿಸಿದ ಪಂಪ, ರನ್ನ, ಪೊನ್ನ ಇವರುಗಳು ಕವಿ ಚಕ್ರವರ್ತಿಗಳು ಎನಿಸಿಕೊಂಡರೆ ಸರ್ವಜ್ಞ ನಿಜಕ್ಕೂ ಜನಪದ ಕವಿ ಚಕ್ರವರ್ತಿ.

ಸರ್ವಜ್ಞನ ಕಾಲದೇಶಗಳ ವಿಚಾರ ಅಷ್ಟು ಸ್ಪಷ್ಟವಾಗಿ ತಿಳಿದಿಲ್ಲ ಈ ಕವಿ ಯಾವುದನ್ನೂ ತನ್ನ ವಚನಗಳಲ್ಲಿ ಖಚಿತವಾಗಿ ತಿಳಿಸಿಲ್ಲ. ಸರ್ವಜ್ಞ ಎಂದರೆ ಸರ್ವವನ್ನೂ ಬಲ್ಲವನು ಎಂದರ್ಥ. ಸರ್ವಜ್ಞ ಅನುಭವದ ಶಾಲೆಯಲ್ಲಿ ಕಲಿತು ಅಪಾರವಾದ ಲೋಕಾನುಭವವನ್ನುಗಳಿಸಿ ಮಾನವ ಬದುಕಿಗೆ ಅನ್ವಯವಾಗುವಂತಹ ಎಲ್ಲ ಸಂಗತಿಗಳ ಬಗ್ಗೆಯೂ ವಚನಗಳನ್ನು ರಚಿಸಿದನು. ಅವನ ಈ ಅದ್ಭುತವಾದ ಜ್ಞಾನ ವಿವೇಕ ಅವಲೋಕನಾಶಕ್ತಿ–ಇವುಗಳನ್ನು ತಿಳಿದೇ ಜನರು ಈತನಿಗೆ ಸರ್ವಜ್ಞ ಎಂಬ ಬಿರುದು ನೀಡಿರಬೇಕು. ಇಷ್ಟಾದರೂ ಸರ್ವಜ್ಞನಿಗೆ ತಾನು ಮಹಾಜ್ಞಾನಿಯೆಂಬ ಅಹಂಕಾರವಿಲ್ಲ ಅವನೇ ಹೇಳಿಕೊಂಡಿರುವಂತೆ:

ಸರ್ವಜ್ಞನೆಂಬುವನು ಗರ್ವದಿಂದಾದವನೆ
ಸರ್ವರೊಳೊಂದೊಂದು ನುಡಿಗಲಿತು ವಿದ್ಯದ
ಪರ್ವತವೇ ಆದ ಸರ್ವಜ್ಞ.

ಸರ್ವಜ್ಞನ ಕಾಲವನ್ನು ಕ್ರಿ. ಶ. 1300 ಮತ್ತು ಕ್ರಿ. ಶ. 1500 ರ ಮಧ್ಯಭಾಗವೆಂದು ತಿಳಿಯಬಹುದು. ಈತನ ಸ್ಥಳ ಧಾರವಾಡ ಜಿಲ್ಲೆಯ ಅಬ್ಬಲೂರು ಎಂಬ ಗ್ರಾಮ. ಈತನ ಕಾಲ, ದೇಶ ಮತ ವಿಚಾರಗಳ ಬಗೆಗೆ ಏನೇ ಭಿನ್ನಾಭಿಪ್ರಾಯಗಳಿದ್ದರೂ ಸರ್ವಜ್ಞ ಕನ್ನಡ ಸಾಹಿತ್ಯಾಕಾಶದಲ್ಲಿ ಜಾಜ್ವಲ್ಯಮಾನವಾಗಿ ಹೊಳೆಯುತ್ತಿರುವ ಒಂದು ನಕ್ಷತ್ರ. ಈತನ ಹೆಸರಿನಲ್ಲಿ ದೊರಕಿರುವ ಸುಮಾರು ಎರಡು ಸಾವಿರಕ್ಕೂ ಮಿಗಿಲಾದ ವಚನಗಳು ಕನ್ನಡದ ಶಾಶ್ವತ ಸಂಪತ್ತಾಗಿದೆ. ಇಂದಿಗೂ ಸಹ ವಿದ್ಯಾವಂತರು ಅವಿದ್ಯಾವಂತರೆನ್ನದೆ ಎಲ್ಲರ ಬಾಯಲ್ಲಿಯೂ ನುಡಿಯುತ್ತಿರುವ ವಚನಗಳು ಸರ್ವಜ್ಞನ ಸಾಹಿತ್ಯದ ಸಾರ್ಥಕತೆಗೆ ಸಾಕ್ಷಿಯಾಗಿದೆ.

ಸರ್ವಜ್ಞ ಎಲ್ಲ ಕವಿಗಳಂತೆ ಇತಿಹಾಸ, ಪುರಾಣ, ರಾಮಾಯಣ ಮಹಾಭಾರತಗಳನ್ನು ಆಧರಿಸಿ ದೀರ್ಘ ಕಾವ್ಯಗಳನ್ನು ಬರೆಯಲಿಲ್ಲ. ಆತನ ಸಾಹಿತ್ಯದ ವೈಶಿಷ್ಟ್ಯವೆಂದರೆ ತಾನು ಕಂಡ ಒಂದು ನೋಟ, ತನಗೆ ಹೊಳೆದ ಒಂದು ಆಲೋಚನೆ, ಅನುಭವ ಇಂತಹವುಗಳನ್ನು ಅತಿ ಹೋಲಿಕೆಗಳಿಂದ ತ್ರಿಪದಿಗಳ ರೂಪದಲ್ಲಿ ರಚಿಸಿದನು. ಅವುಗಳು ಜನ ಸಾಮಾನ್ಯರ ಮನಸ್ಸು ಹೃದಯಗಳನ್ನು ನೇರವಾಗಿ ತಾಕಿ ಅದ್ಭುತ ಪರಿಣಾಮವನ್ನುಂಟುಮಾಡಿ ಅವರ ಬುದ್ಧಿ ನಡವಳಿಕೆ ಸಂಸ್ಕಾರಗಳನ್ನು ತಿದ್ದಲು ಸಹಕಾರಿಯಾದವು.

ಸರ್ವಜ್ಞ ತನ್ನ ವಚನಗಳಲ್ಲಿ ಹೇಳದೆ ಇರುವ ವಿಚಾರಗಳೇ ಇಲ್ಲವೆನ್ನಬಹುದು ದೇವರು, ಧರ್ಮ ಭಕ್ತಿ, ಗುರು, ವಿಧಿ, ದಾನ, ವಿದ್ಯೆ – ಹೀಗೆ ಹಲವಾರು ವಿಷಯಗಳ ಬಗ್ಗೆ ತನ್ನ ವಿಚಾರ ಧಾರೆಯನ್ನು ಹರಿಸಿದ್ದಾನೆ.

ದೇವರನ್ನು ಕುರಿತು ಸರ್ವಜ್ಞ ಹೇಳಿರುವ ವಿಚಾರಗಳನ್ನು ಹೀಗೆ ಸಂಗ್ರಹಿಸಬಹುದು. ಈ ಜಗತ್ತು ಶಿವನಿಂದ ಹೊರತಾದುದಲ್ಲ. ಶಿವನನ್ನು ನಂಬಿದರೆ ಭವಪಾಶ ತಪ್ಪಿಹೋಗುವುದು. ಜ್ಞಾನಿಗಳ ಹೃದಯದಲ್ಲಿ ಈಶ್ವರ ಅಡಗಿರುವನು ಎಂಬುದನ್ನು ಸರ್ವಜ್ಞ ಬಣ್ಣಿಸಿರುವ ಬಗೆ ಇದು,

ಆನೆ ಕನ್ನಡಿಯಲಿ ತಾನಡಗಿ ಇಪ್ಪಂತೆ
ಜ್ಞಾನವುಳ್ಳವರ ಹೃದಯದಲಿ ಪರಶಿವನು
ತಾನಡಗಿ ಇಹನು ಸರ್ವಜ್ಞ.

ಭಗವಂತ ಸರ್ವವ್ಯಾಪಿ. ಕಲ್ಲಿನಲ್ಲಿ, ಮಣ್ಣಿನಲ್ಲಿ ಮುಳ್ಳಿನ ಮೊನೆಯಲ್ಲಿ ಎಲ್ಲಿ ನೆನೆದರೆ ಅಲ್ಲಿದ್ದಾನೆ ಎಂದು ಹೇಳಿ ಕೊನೆಗೆ;

ಅಲ್ಲಿಪ್ಪನಿಲ್ಲಿಪ್ಪನೆಲ್ಲಿಪ್ಪ ನೆನಬೇಡ
ಕಲ್ಲಿನಂತಿಪ್ಪ ಮಾನವನ ಮನ ಕರಗೆ
ಅಲ್ಲಿಪ್ಪ ನೋಡ ಸರ್ವಜ್ಞ.

ಮಾನವ ಮನಸ್ಸಿನಲ್ಲಿ ತುಂಬಿಕೊಂಡಿರುವ ದ್ವೇಷ ಅಸೂಯೆ, ಸ್ವಾರ್ಥ ಇಂತಹ ನೀಚಭಾವನೆಗಳು ಅಳಿದು ಆ ಜಾಗದಲ್ಲಿ ಪ್ರೀತಿ, ಸ್ನೇಹ, ನಿಸ್ವಾರ್ಥತೆ ಈ ಭಾವನೆಗಳು ಹುಟ್ಟಿಕೊಂಡು ಮನಕರಗಿ ಒಲವು ಹೊನಲಾಗಿ ಹರಿದಾಗ ಈಶ್ವರ ಅಂತಹವರ ಹೃದಯದಲ್ಲಿ ನೆಲೆಸುತ್ತಾನೆ. ಮರಳು, ಶಿಲೆ, ಚಿತ್ರದಲ್ಲಿ ಇರುವಾತ ಮನುಷ್ಯನ ಮನಸ್ಸಿನಲ್ಲಿ ಇರನೇ ? ಎಂದು ಪ್ರಶ್ನಿಸಿದ್ದಾನೆ.

ಭಾರತೀಯ ಜನ ಜೀವನವನ್ನು ಅಶಾಂತಿಯ ಆಗರವನ್ನಾಗಿ ಮಾಡಿರುವುದು ಜಾತಿ ಮತಗಳೆಂಬ ವ್ಯತ್ಯಾಸ. ಈ ವ್ಯತ್ಯಾಸವನ್ನು ಕುರಿತು ಸರ್ವಜ್ಞ ಬಹು ಅರ್ಥಪೂರ್ಣವಾದ ಮಾತುಗಳನ್ನು ಹೇಳಿದ್ದಾನೆ. ಅವುಗಳನ್ನು ಅರಿತು ಆಚರಣೆಯಲ್ಲಿ ತಂದರೆ ಸಮಾಜದ ಏಳಿಗೆ ಸಾಧ್ಯವಾಗುತ್ತದೆ.

ನಡೆವುದೊಂದೇ ಭೂಮಿ ಕುಡಿವುದೊಂದೇ ನೀರು
ಸುಡುವಗ್ನಿಯೊಂದೆ ಇರುತಿರೆ ಕುಲಗೋತ್ರ
ನಡುವೆ ಎತ್ತಣದು ಸರ್ವಜ್ಞ

ಜಾತಿ ಹೀನನ ಮನೆಯ ಜ್ಯೋತಿ ತಾ ಹೀನವೇ
ಜಾತಿ ವಿಜಾತಿಯೆನಬೇಡ ದೇವನೊಲಿ
ದಾತನೆ ಜಾತ ಸರ್ವಜ್ಞ

ಇಂಗಿನೊಳು ನಾತವನು ತೆಂಗಿನೊಳಗೆಳನೀರ
ಭೃಂಗ ಕೋಕಿಲೆಯ ಕಂಠದೊಳು ಗಾಯನವ
ತುಂಬಿದವನಾರು ಸರ್ವಜ್ಞ

ಎಂಬಲ್ಲಿ ದೇವರ ಅಸ್ತಿತ್ವವನ್ನು ಸಾರಿದ್ದಾನೆ.

ಆ ದೇವ ಈ ದೇವ ಮಾದೇವ ನೆನದೇಡ
ಆ ದೇವರ ದೇವ ಭುವನದ ಪ್ರಾಣಿಗಳಿ
ಗಾದವನೇ ದೇವ ಸರ್ವಜ್ಞ

ಎಂದು ಹೇಳುವಲ್ಲಿ ಲೋಕದ ಸಕಲ ಪ್ರಾಣಿಗಳಿಗೆ ಒಳ್ಳೆಯದನ್ನು ಬಯಸುವವನೇ ದೇವ ಎಂದು ಹೇಳಿ ಆತನ ಮಹತ್ವವನ್ನು ಹೇಳಿದ್ದಾನೆ. ಪರರಿಗೆ ಉಪಕಾರಿಯಾಗಿ ಅನ್ಯರಿಗೆ ನೋವುಂಟಾಗದಂತೆ ನಡೆದುಕೊಂಡಾಗ ನಮಗೂ ಸುಖ ವುಂಟಾಗುವುದು ಎಂಬ ಬೋಧನೆ ಇಲ್ಲಿ ಅಡಗಿದೆ

ಗುರುವನ್ನು ಕುರಿತು ಸರ್ವಜ್ಞ ಹೇಳಿರುವ ವಿಚಾರಗಳು ಮನನೀಯವಾಗಿದೆ ಮುಕ್ತಿ ದೊರಕಿಸಲು ಗುರುವಿನ ಅಗತ್ಯವಿದೆ ಬಂಧುಗಳು ಮನೆಗೆ ಬಂದು ಉಂಡುಹೋಗುವರು ಆದರೆ ಗುರುಗಳು ಇಹದ ಬಂಧನವನ್ನು ಬಿಡಿಸಿಕೊಳ್ಳುವ ಮಾರ್ಗವನ್ನು ಸೂಚಿಸಬಲ್ಲ ಆದ್ದರಿಂದ ಆ ಮಾರ್ಗವನ್ನು ತಿಳಿಯಬೇಕಾದರೆ ಗುರುವಿನ ಅಗತ್ಯವಿದೆ.

ಪರ ತನ್ನೊಳಿರ್ದು ಗುರು ತೋರದಿರೆ ತಿಳಿವುದೆ
ಮರದೊಳಗೆ ಅಗ್ನಿ ಇರುತಿರ್ದು ತನ್ನ ತಾ
ನರಿಯಬೇಕೆಂದ ಸರ್ವಜ್ಞ

ಸದ್ಗುರುವಿನ ಉಪದೇಶದಿಂದ ಮುಕ್ತಿ ಹೇಗೆ ಕೈವಶವಾಗುವುದೆಂದು ಸರ್ವಜ್ಞ ಸುಂದರವಾಗಿ ಹೇಳಿದ್ದಾನೆ

ಮೊಸರು ಕಡೆಯಲು ಬೆಣ್ಣೆ ಯೊಸೆದು
ತೋರುವ ತೆರದಿ
ಹಸನಪ್ಪ ಗುರುವಿನುಪದೇಶದಿಂದ ಮುಕ್ತಿ
ವಶವಾಗದಿಹುದೆ ಸರ್ವಜ್ಞ

ಸರ್ವಜ್ಞನ ಅಭಿಪ್ರಾಯದಲ್ಲಿ ಗುರು ಯಾರಾದರೂ ಆಗಬಹುದು. ಆದರೆ ಸತ್ಯದ ಮಾರ್ಗವನ್ನು ತಿಳಿಸುವ ಸಾಮರ್ಥ್ಯ ಇರಬೇಕು.

ಊರಿಂಗೆ ದಾರಿಯನು ಆರು ತೋರಿದರೇನು
ಸಾರಾಯದ ನಿಜವ ತೋರುವ ಗುರುವು ತಾ
ನಾರಾದಡೇನು ಸರ್ವಜ್ಞ

ಗುರುಗಳ ಪಾದಸೇವೆ ದೊರೆತರೆ ಕರ್ಪೂರದ ಬೆಟ್ಟ ಸುಟ್ಟುಹೋಗುವ ಹಾಗೆ ನಮ್ಮ ಪಾಪದ ಬೆಟ್ಟ ಬೆಂದು ಹೋಗುತ್ತದೆ. ಸಂಸಾರದ ಕಷ್ಟ ಕಾರ್ಪಣ್ಯಗಳ ಕೋಟಲೆಯಲ್ಲಿ ಸಿಲುಕಿದವರು ಅವುಗಳಿಂದ ಹೊರಬರಲು ಗುರುಪಾದವೇ ಸೋಪಾನವೆಂದು ಹೇಳಿ ಗುರುವಿನ ಮಹಿಮೆಯನ್ನು ಸರ್ವಜ್ಞ ಪರಿಪರಿಯಾಗಿ ಬಣ್ಣಿಸಿದ್ದಾನೆ.

ಜ್ಞಾನ, ನಿಜವಾದ ಜ್ಞಾನಿ ಈ ವಿಚಾರಗ… ಬಗ್ಗೆ ಅಮೂಲ್ಯವಾದ ವಿಚಾರಗಳನ್ನು ಹೇ… ದ್ದಾನೆ. ಸರ್ವಜ್ಞನ ದೃಷ್ಟಿಯಲ್ಲಿ ನಿಜವಾ… ಜ್ಞಾನಿ ಎಂದರೆ;

ತನ್ನ ನೋಡಲಿ ಎಂದು ಕನ್ನಡಿಯು
ಕರೆಯುವು…
ತನ್ನಲ್ಲಿ ಜ್ಞಾನವುದಿಸಿದ ಮಹಾತ್ಮನು
ಕನ್ನಡಿಯು ಜಗಕೆ ಸರ್ವಜ್ಞ

ಧ್ಯಾನದ ಹೊಸ ಭಕ್ತಿ, ಮೌನವೆಂ… ತಿಳಿದುಪ್ಪ ಸ್ವಾನುಭವವೆಂಬ ಜ್ಞಾನ ಜ್ಯೋ… ನಮ್ಮ ಅಜ್ಞಾನವನ್ನು ಸುಡುತ್ತದೆ ಎಂದಿದ್ದಾ… ಸರ್ವಜ್ಞ. ಒಮ್ಮೆ ಸತ್ಯವನ್ನರಿತ ಜ್ಞಾನಿ ಎ… ಸಂಸಾರದ ಬಂಧನಕ್ಕೆ ಸಿಲುಕುವುದಿಲ್ಲ–ಹೇಗೆಂದು…

ಮುತ್ತು ನೀರೊಳುಪುಟ್ಟಿ ಮತ್ತೆ ನೀರಪ್ಪುದೆ
ಸತ್ಯವನರಿದ ಜ್ಞಾನಿ ಸಂಸಾರವನು
ಮತ್ತೆ ಹೊದ್ದುವನೆ ಸರ್ವಜ್ಞ

ಜಗತ್ತಿನಲ್ಲಿ ಜ್ಞಾನವೇ ಶ್ರೇಷ್ಠ ಎಂಬುದನ… ಸರ್ವಜ್ಞ ಹೀಗೆ ವಿವರಿಸಿದ್ದಾನೆ.

ಜ್ಞಾನದಿಂ ಮೇಲಿಲ್ಲ ಧ್ಯಾನದಿಂ ಕೀಳಿಲ್ಲ
ಭಾನುವಿಂದಧಿಕ ಬೆಳಗಿಲ್ಲ ಜಗದೊಳಗೆ
ಜ್ಞಾನವೆ ಮಿಗಿಲು ಸರ್ವಜ್ಞ

ನಿಜವಾದ ಜ್ಞಾನಿಗೆ ಯಾವ ಭಯವೂ ಇ… ಲೋಕದ ಟೀಕೆ ನಿಂದೆಗಳು ಅವನನ್ನು ತಾಕುವುದ… ಇಲ್ಲ.

ಆನೆ ನೀರಾಟದಲಿ ಮೀನ ಕಂಡಂಜುವುದೇ
ಹೀನ ಮಾನವರ ಬಿರುನುಡಿಗೆ ತತ್ತ್ವದ
ಜ್ಞಾನಿಯಂಜುವನೆ ಸರ್ವಜ್ಞ

ಜ್ಞಾನಿಯಾದವನು ಸಂಸಾರದಲ್ಲಿದ್ದರೂ ಅಧರ್ಮಕ್ಕೆ ಕೈಹಾಕುವುದಿಲ್ಲ. ಅಸತ್ಯದ ದಾ… ಯಲ್ಲಿ ನಡೆಯುವುದಿಲ್ಲ.

ಜ್ಞಾನಿ ಸಂಸಾರದೊಳು ತಾನಿರಲು ತಿಳಿದಿಹನ…
ಭಾನು ನೋಡದಲಿ ಹೊಳೆವಂತೆ ಸದಮಲ
ಜ್ಞಾನದೊಳಿಹನು ಸರ್ವಜ್ಞ

ಸರ್ವಜ್ಞ ದೇವರ ಭಕ್ತಿಯನ್ನು ಕುರಿ… ಹೇಳುವಾಗ ಜನರಲ್ಲಿ ಕಾಣುವ ತೋರಿಕೆಯ… ಭಕ್ತಿಯನ್ನು ಕಟುವಾಗಿ ಟೀಕಿಸಿದ್ದಾನೆ. ಭಕ್ತಿಯ… ಸೋಗು ಹಾಕಿ ಜನರನ್ನು ವಂಚಿಸುವವರನ… ಖಂಡಿಸಿದ್ದಾನೆ. ದೃಢವಾದ ಮನಸ್ಸಿಲ್ಲ… ದೇವರನ್ನು ಎಷ್ಟು ಪೂಜಿಸಿದರೂ ಅದು ವ್ಯರ್ಥ ವೆಂದಿದ್ದಾನೆ ಸರ್ವಜ್ಞ.

## ಸದಾನೆಲಸು ಎನ್ನ ಮನದಿ ತಾಯೆ

**ಪೂರ್ವಿಕಲ್ಯಾಣಿ.** **ಆದಿತಾಳ.**

ಸದಾ ನೆಲಸು ಎನ್ನ ಮನದಿ ತಾಯೆ
ಸನ್ಮಂಗಳ ನಿತ್ಯಾನಂದದಾಯೆ ॥ ಪ ॥

ವೇದ ಮುಖ ಮಂದಾರಮಾಲೆಯುವಳೆ
ಮಧುಸೂದನನ ದಿವ್ಯಸಂಪದ ಶ್ರೀಯೆ ॥ ಅ. ಪ ॥

ನೀನೆನ್ನ ಮಾತೆ ಪಿತ ವಾಸುದೇವ
ನಿಮ್ಮೀರ್ವರ ದಯೆ ಒಂದೇಸಮನಿದೆ।
ನಿಮ್ಮ ಪಾದಸೇವೆಗೇ ನಾ ದತ್ತು
ಬೇಡಿದ ವರ ಕೊಡೆ ಹಸನ್ಮುಖದಿಂದ ॥ ೧ ॥

ಎಲ್ಲ ಕಲ್ಯಾಣಕೆ ಅಕ್ಷಯ ನಿಧಿಯೆ
ಎಲ್ಲ ಕಾರುಣ್ಯದ ಎಲ್ಲೆಯು ಕೊನೆಯೆ
ಎಲ್ಲ ಲೋಕ ಜನ ಪ್ರಾರ್ಥನೆ ಗನ್ಯ್ಯ
ಕಾಮಧೇನು ವಂತಿರುವಳೆ ವರದೆ ॥ ೨ ॥

(—ಶ್ರೀ ವೇದಾಂತದೇಶಿಕರ ಶ್ರೀಸ್ತುತಿಯಿಂದ ಅನುವಾದ.)

**—ಶ್ರೀ ಬಿ.ಎಸ್. ರಾಮಾಚಾರ್**

ಚಿತ್ತವಿಲ್ಲದೆ ಗುಡಿಯ ಸುತ್ತಿದಡೆ ಫಲವೇನು
ಎತ್ತು ಗಾಣವನು ಹೊತ್ತು ತಾ ನಿತ್ಯದಿ
ಸುತ್ತಿ ಬಂದಂತೆ ಸರ್ವಜ್ಞ

ಏಕಾಗ್ರತೆ ಮತ್ತು ನಿರ್ಮಲ ಮನಸ್ಸಿನಿಂದ ಕೂಡಿದ ಭಕ್ತನಿಗೆ ಮನೆ ಮಠ ಎಲ್ಲವೂ ಒಂದೇ ಆಗಿರುತ್ತದೆ. ಆದರೆ ಹರಿದು ಹೋಗುತ್ತಿರುವ ಮನಸ್ಸಿನಿಂದ ಕೂಡಿದವನು ದೇವಾಲಯದಲ್ಲಿದ್ದರೂ ಅಂತಹ ಭಕ್ತಿಯಿಂದ ಲೇಶವೂ ಪ್ರಯೋಜನವಿಲ್ಲ ವೆಂದಿದ್ದಾನೆ ಸರ್ವಜ್ಞ. ಭಕ್ತಿಯಿಂದಲೆ ಮಾನವನಿಗೆ ಆತ್ಮಶಕ್ತಿ ಹಾಗೂ ಮುಕ್ತಿ ಪ್ರಾಪ್ತ ವಾಗುವುದೆಂದು ಸರ್ವಜ್ಞನ ಅಭಿಮತ

ಭಕ್ತಿಯಿಂದಲೆ ಮುಕ್ತಿ ಭಕ್ತಿಯಿಂದಲೆ ಶಕ್ತಿ
ಭಕ್ತಿ ಮುಕ್ತಿಯಳಿಯದಲೀ ಜಗದಲಿ
ಮುಕ್ತಿಯಿಲ್ಲೆಂದ ಸರ್ವಜ್ಞ

ಸರ್ವಜ್ಞ ಹೀಗೆ ಹಲವಾರು ವಿಚಾರಗಳ ಬಗ್ಗೆ ವಚನಗಳನ್ನು ರಚಿಸಿರುವುದಲ್ಲದೆ ಮುಖ್ಯವಾಗಿ ಲೋಕಜೀವನದ ನಡವಳಿಕೆಯಲ್ಲಿ ಕಾಣುವ ಲೋಪದೋಷಗಳನ್ನು ಗುರುತಿಸಿ ಅವುಗಳನ್ನು ತೋರಿಕೊಟ್ಟು ಜನರ ಕಣ್ಣು ತೆರೆಸಿದ್ದಾನೆ. ಸರ್ವಜ್ಞ ಸಮಾಜಕ್ಕೆ ಅಂಟಿದ್ದ ರೋಗಗಳಿಗೆ ಪರಿಹಾರವನ್ನು ಸೂಚಿಸಿ ಸಮಾಜ ಚಿಕಿತ್ಸಕ ನಾಗಿದ್ದಾನೆ. ಸರ್ವಜ್ಞನ ಹಾಗೆ ಜನಜೀವನ ವನ್ನು ನಿರೀಕ್ಷಿಸಿ ಬದುಕಿನ ಅನೇಕ ಮುಖಗಳನ್ನು ಕಂಡು ಚಿಂತಿಸಿ ವಿಮರ್ಶೆ ಮಾಡಿದ ಕವಿ ಬಹುಶಃ ಮತ್ತೊಬ್ಬನಿರಲಾರ. ಸಾಹಿತ್ಯ ಜನಜೀವನದ ವಿಮರ್ಶೆ ಎಂಬ ಮಾತು ಸರ್ವಜ್ಞನಿಗೆ ಚೆನ್ನಾಗಿ ಅನ್ವಯಿಸುತ್ತದೆ. ಸರ್ವಜ್ಞನ ತೀಕ್ಷ್ಣವೂ ಆಳವೂ ಆದ ಲೋಕದೃಷ್ಟಿ ಗಟ್ಟಿಯಾದ ಅನುಭವ ಗಳ ಹಿನ್ನೆಲೆಯಲ್ಲಿ ಮೂಡಿಬಂದಿರುವ ಜೀವನದ ಮೌಲ್ಯಗಳು–ಶಾಶ್ವತ ಮೌಲ್ಯಗಳಾಗಿವೆ.

ಕರಣಗಳ ಶುದ್ಧಿ ಇಲ್ಲದೆ ಇವುಗಳನ್ನು ಉದ್ಧಾತ್ತೀಕರಿಸದಿದ್ದರೆ ಆತ್ಮದ ಉದ್ಧಾರವು ಸಾಧ್ಯ ವಾಗದು. ಇಂದ್ರಿಯಗಳ ನಿಗ್ರಹ ಸುಲಭ ಸಾಧ್ಯವಲ್ಲವೆಂದ್ದಾನೆ ಸರ್ವಜ್ಞ.

ಜಡೆಯು ಕಟ್ಟಲುಬಹುದು
ಕಡವಸವನುಡಬಹುದು
ಬಿಡದೆ ಬೇಗುಲದೊಳಿರಬಹುದು ಕರಣಗಳ
ತಡೆಯುವುದೆ ಕಷ್ಟ ಸರ್ವಜ್ಞ

ಮತ್ತೊಂದು ವಚನದಲ್ಲಿ ವೇಶದಾರಿಗಳನ್ನು ಸರ್ವಜ್ಞ ಹೀಗೆ ಹಾಸ್ಯ ಮಾಡಿದ್ದಾನೆ.

ಅತ್ತಿ ಮರ ತಾ ಕಾಯಿ ಹೊತ್ತಿದ್ದ ತೆರನಂತೆ
ತತ್ತ್ವ ಭೇದವನು ಅರಿಯದೆ ರುದ್ರಾಕ್ಷಿ
ಹೊತ್ತು ಫಲವೇನು ? ಸರ್ವಜ್ಞ

ಶರೀರವನ್ನು ದಂಡಿಸಿ ಮುಕ್ತಿ ಪಡೆಯಲು ಹೊರಟವರನ್ನು ಸರ್ವಜ್ಞ ಒಪ್ಪುವುದಿಲ್ಲ.

ಒಡಲದಂಡಿಸಿ ಮುಕ್ತಿ ಪಡೆವೆನೆಂಬುವನೆಗ್ಗ
ಬಡಿಗೆಯಲಿ ಹುತ್ತ ಹೊಡೆಯಲಡಗಿಹ ಸರ್ಪ
ಮಡಿದಿಹುದೇ ಸರ್ವಜ್ಞ

ಸರ್ವಜ್ಞ ಸಾರಿದ ಬದುಕಿನ ಮೌಲ್ಯಗಳಲ್ಲಿ ಮುಖ್ಯವಾದವು – ವ್ಯಕ್ತಿಗೆ ಅರಿವೇ ಗುರುವಾಗ ಬೇಕು. ತನ್ನ ಜೀವನ ಭಗವಂತನದು ಎಂಬ ಭಾವನೆ ಬರಬೇಕು. ಪ್ರಪಂಚವನ್ನು ತನ್ನದಾಗಿ ಕಾಣುವ ದೃಷ್ಟಿ ಬರಬೇಕು.

ತನ್ನ ತಾನರಿತಂಗೆ ಭಿನ್ನ ಭಾವನೆಯಿಲ್ಲ
ತನ್ನದೂ ಇಲ್ಲ, ಪರವಿಲ್ಲ, ತ್ರೈಭುವನ
ತನ್ನೊಳಗೆ ಇಹುದು ಸರ್ವಜ್ಞ

"ತನ್ನಂತೆ ಪರರ ಬಗೆದೊಡೆ ಕೈಲಾಸ ಬಿನ್ನಾಣವಕ್ಕು" ಎಂಬ ಮಾತಿನಲ್ಲಿ ಮಾನವ ಬದುಕಿಗೆ ಬಹುದೊಡ್ಡ ಮೌಲ್ಯವನ್ನು ನೀಡಿದ್ದಾನೆ "ಸತ್ಯರ ನುಡಿತೀರ್ಥ ನಿತ್ಯರ ನಡೆತೀರ್ಥ", "ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ", "ಸಿರಿಯು ಸಂಸಾರವು ಸ್ಥಿರವೆಂದು ನಂಬದಿರು", "ಅತಿಯಾಸೆ ಮಾಡುವನು ಗತಿಗೇಡಿಯಾಗುವನು", "ಸಾಲವನು ಕೊಂಬಾಗ ಹಾಲೋಗರುಂಡಂತೆ" "ಆಳಾಗಬಲ್ಲವನು ಆಳುವನು ಅರಸಾಗಿ", " ಕೋಟಿ ವಿದ್ಯೆಗಳಲಿ ಮೇಟಿ ವಿದ್ಯೆಯೇಲೇಸು ". "ಒಡಲೆಂಬ ಹುತ್ತಕ್ಕೆ ನುಡಿವ ನಾಲಿಗೆ ಸರ್ಪ", "ರಸಿಕನಾಡಿದ ಮಾತು ಶಶಿಯುದಿಸಿ ಬಂದಂತೆ"–ಇಂತಹ ಸಾವಿರಗಟ್ಟಲೆ ನುಡಿಗಳಲ್ಲಿ ಸರ್ವಜ್ಞ ವ್ಯಕ್ತಿಯ ಬಾಳಿಗೆ ಅಗತ್ಯವಾಗುವ ನೀತಿಯನ್ನು ಸಾರಿದ್ದಾನೆ. ಅರಿತರೆ ಮಾನವ ಮರೆತರೆ ದಾನವ ಎಂಬಂತೆ ನಾವು ಈ ಮಾತು ಗಳನ್ನು ಅರಿತು ಆಚರಣೆಯಲ್ಲಿ ತಂದರೆ ನಮ್ಮ ಬದುಕೂ ಶುದ್ಧವಾಗಿ ಸಾರ್ಥಕವಾಗಿ ಇಹಕ್ಕೆ ಸಾಧಕವೂ ಪರಕ್ಕೆ ಮಾರ್ಗವೂ ಆಗುತ್ತದೆ. ಇಲ್ಲ ದಿದ್ದರೆ ದೊಡ್ಡದಾದ ಮಾನವ ಜನ್ಮ ವ್ಯರ್ಥವಾಗಿ ಇಹಪರಗಳೆರಡರಲ್ಲೂ ಮಾನವ ಬದುಕು ಹೀನಾಯವಾಗುತ್ತದೆ.

ಸರ್ವಜ್ಞನ ವಚನಗಳು ಕನ್ನಡ ಸಾಹಿತ್ಯದಲ್ಲಿ ಚಿರಂತನವಾಗಿ ಉಳಿದು ಹೊಳೆಯುವ ತಾರೆಗಳು. ಅವನ ಅಗಾಧವಾದ ಸಾಮಾಜಿಕ ಪ್ರಜ್ಞೆಯಿಂದ ಮೂಡಿ ಬಂದ ವಚನಗಳು ವಿಚಾರ ಪ್ರಪಂಚಕ್ಕೆ ನೀಡಿದ ಕಾಣಿಕೆಗಳಾಗಿವೆ. ಜನಸಾಮಾನ್ಯರ ಭಾಷೆ, ಭಾವನೆ, ಆಶೆ, ಅನಿಸಿಕೆಗಳನ್ನೇ ಬಳಸಿ ಕೊಂಡು ರಚಿಸಿದ ಸರ್ವಜ್ಞನ ವಚನಗಳು ಕನ್ನಡಿಗರ ಅಮೂಲ್ಯ ಆಸ್ತಿಯಾಗಿದೆ. ಅವುಗಳ ಅರ್ಥವನ್ನು ಗ್ರಹಿಸಿದಾಗ ದೊರೆಯುವ ಲಾಭ ಗಳೆಂದರೆ ನಮ್ಮನ್ನು ಪರಿಶುದ್ಧ ನಿಸ್ವಾರ್ಥ ತ್ಯಾಗಮಯ ಬದುಕಿನ ಕಡೆಗೆ ಕರೆದೊಯ್ಯುವು ದಲ್ಲದೆ ನಮ್ಮ ಆತ್ಮೋದ್ಧಾರಕ್ಕೂ ನೆರವು ನೀಡುತ್ತವೆ.

★

## ಪ್ರಾಣಿ ಪಕ್ಷಿ ಬಲಿಯ ನಿಶೇಧ ಕಾನೂನು

ಆಂಧ್ರಪ್ರದೇಶದ 1950 ರ ಪ್ರಾಣಿ ಪಕ್ಷಿ ಬಲಿ ನಿಶೇಧ ಕಾನೂನಿನ 3ನೇ ಕಲ ಮಿನನ್ವಯ ಯಾವುದೇ ವ್ಯಕ್ತಿಯೂ ಸಾರ್ವಜನಿಕ ಆರಾಧನೆಯ ಸ್ಥಳಗಳಲ್ಲಿ,ಧಾರ್ಮಿಕ ಆರಾಧನೆಯ ಸ್ಥಳಗಳಲ್ಲಿ ಅಥವಾ ಯಾವುದೇ ಧಾರ್ಮಿಕ ಮೇಳ ಮೆರವಣಿಗೆಗಳಲ್ಲಿ ಯಾಗಲೀ ಪ್ರಾಣಿ ಪಕ್ಷಿಗಳನ್ನು ಬಲಿ ನೀಡುವುದನ್ನು ನಿಶೇಧಿಸಲಾಗಿದ್ದು, ಅದೇ ಕಾನೂನಿನ 6 ನೇ ಕಲಮಿನನ್ವಯ ಈ ನಿಯಮವನ್ನುಲ್ಲಂಘಿಸಿದವರಿಗೆ ಮೂರು ತಿಂಗ ಳಿನಿಂದ ಐದು ತಿಂಗಳ ಸಾದಾಸಜೆ ಅಥವಾ ಮುನ್ನೂರು ರೂಗಳ ದಂಡ ಅಥವಾ ಎರಡನ್ನೂ ವಿಧಿಸಲಾಗುವುದು. ಹಾಗಾಗಿ ಪ್ರಾಣಿ ಪಕ್ಷಿ ಬಲಿಯನ್ನು ಕೋಳಿಜಗಳ ಗಳನ್ನು ತಡೆಯಲು ಕೈಗೊಳ್ಳತಕ್ಕದ್ದು.

ಜಿಲ್ಲಾಧಿಕಾರಿಗಳು ಹಬ್ಬ, ಉತ್ಸವಗಳಿಗೆ ಮೊದಲು ಅಧಿಕಾರಿ ಹಾಗೂ ಸಾರ್ವಜನಿಕರ ಸಭೆಗಳನ್ನು ಏರ್ಪಡಿಸಿ, ಪ್ರಾಣಿ ಪಕ್ಷಿ ಬಲಿಗಳನ್ನು ತಡೆಯಲು ಕ್ರಮಗಳನ್ನು ಕೈಗೊಳ್ಳಬೇಕೆಂದು ಬೇಡಲಾಗಿದೆ.

**ಹನುಮಂತರಾವ್**

ಸರ್ಕಾರದ ಉಪಕಾರ್ಯದರ್ಶಿ, ಆಂಧ್ರಪ್ರದೇಶ.

# ಶ್ರೀ ವೆಂಕಟೇಶ್ವರಸ್ವಾಮಿದೇವಾಲಯ, ತಿರುಮಲೆ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ದತ್ತಿಯನ್ನು ನೀಡ ಬಯಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯನ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಅರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಸೇರಿರುವುದಿಲ್ಲ.

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ;

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟನ್ನೇ ಕಳುಹಿಸಬೇಕು. ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗಧಿ ಆಗಿರುವ ದತ್ತಿಯ ಮೌಲ್ಯ ರೂ: 3 ಲಕ್ಷ. ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರುವುದು.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಅರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ
  (2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು (ಒಂದುಬಾರಿಗೆ 10% ದಂತೆ). ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ.ತಿ.ದೇ. ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು.

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ

ಬರೆಯಿರಿ:

**ಕಾರ್ಯನಿರ್ವಹಣಾಧಿಕಾರಿ**

ತಿ. ತಿ. ದೇ. ತಿರುಪತಿ.

# ಕರ್ನಾಟಕದಲ್ಲಿ ಶ್ರೀ ಗೋದಾದೇವಿ

ಕರ್ನಾಟಕದ ಜೀವಂತ ಧರ್ಮಗಳಲ್ಲಿ ಶ್ರೀ ವೈಷ್ಣವ ಧರ್ಮವೂ ಒಂದು. ಜೈನ, ವೀರಶೈವಗಳಿಗೆ ಸಮಾನಾಂತರವಾಗಿ ಈ ಧರ್ಮವು ಕರ್ನಾಟಕದ ಅನೇಕ ಭಾಗಗಳಲ್ಲಿ ಹರಡಿದೆ. ವಿಶೇಷತಃ ಈ ಧರ್ಮವು ಹಳೆ ಮೈಸೂರಿನ ದಕ್ಷಿಣ ಜಿಲ್ಲೆಗಳಾದ ಮೈಸೂರು, ಮಂಡ್ಯ, ಹಾಸನ, ಬೆಂಗಳೂರು ಮತ್ತು ಕೋಲಾರಗಳಲ್ಲಿ ಪ್ರಮುಖವಾಗಿದ್ದು, ಉಳಿದೆಡೆಗಳಲ್ಲಿ ಸುಮಾರಾದ ಜನವಸತಿಯನ್ನು ಹೊಂದಿದೆ. ತುಂಗಭದ್ರಾನದಿಗೆ ದಕ್ಷಿಣದಲ್ಲಿಯೇ ಈ ಧರ್ಮದವರು ಹೆಚ್ಚಾಗಿದ್ದು, ಈ ನದಿಯ ಉತ್ತರ ಭಾಗದಲ್ಲಿ ಹಾಗೂ ಪಶ್ಚಿಮ ಕರಾವಳಿಯಲ್ಲಿ ಇವರು ಬೆರಳೆಣಿಸುವಷ್ಟು ಇರುವರು.

## ಪುರಾತನ ಸಂಬಂಧಗಳು :—

ಕರ್ನಾಟಕದಲ್ಲಿ ಶ್ರೀರಾಮಾನುಜರ ಪ್ರವೇಶದ ನಂತರವೇ ಶ್ರೀ ವೈಷ್ಣವ ಧರ್ಮವು ಹೆಚ್ಚು ಜನ ಪ್ರಿಯತೆಯನ್ನು ಗಳಿಸಿತು. ಇದಕ್ಕೆ ಮುಂಚೆ ಶ್ರೀ ವೈಷ್ಣವ ಧರ್ಮವು ಅಷ್ಟಾಗಿ ಹರಡಿರಲಿಲ್ಲ. ಅಂದ ಮಾತ್ರಕ್ಕೆ ವಿಷ್ಣುವಿನ ಪೂಜೆಯೇ ಇರಲಿಲ್ಲವೆಂದಲ್ಲ, ವಿಷ್ಣು ದೇವಾಲಯಗಳು ಇರಲಿಲ್ಲವೆಂದಲ್ಲ ಇತ್ತು, ವಿಷ್ಣು ಉಪಾಸನೆ ಹಾಗೂ ಅನೇಕ ಅವತಾರಗಳಲ್ಲಿ ವಿಷ್ಣುವಿನ ಪೂಜೆಯನ್ನು 4-5 ಶತಮಾನಗಳಲ್ಲಿ ಪ್ರಾರಂಭಿಕ ಕದಂಬರ ಕಾಲದಲ್ಲಿಯೇ ಅಲ್ಲದೆ ಬಾದಾಮಿಯ ವೈಷ್ಣವ ಗುಹೆಗಳಲ್ಲಿನ ಶಿಲ್ಪಕಲೆಯಲ್ಲಿಯೂ ಕಾಣಬಹುದು. ಆದರೆ ಶ್ರೀವೈಷ್ಣವ ಧರ್ಮವು ತಮಿಳು ನಾಡಿನಲ್ಲಿ ನಾಥಮುನಿ, ಯಾಮುನಾಚಾರ್ಯರಿಂದ ರೂಪಿಸಲ್ಪಟ್ಟು, ಶ್ರೀರಾಮಾನುಜರಿಂದ ವಿಶಿಷ್ಟಾದ್ವೈತ ತತ್ತ್ವದ ಮುಖಾಂತರ ಸಂಸ್ಥಾಪಿಸಲ್ಪಟ್ಟಿತು.

ಕರ್ನಾಟಕದಲ್ಲಿ ರಾಮಾನುಜರಿಗಿಂತ ಮುಂಚೆಯೆ ಚೋಳರಿಂದ ಆಕ್ರಮಿಸಲ್ಪಟ್ಟ ಕರ್ನಾಟಕದ ದಕ್ಷಿಣಾತ್ಯ ಪ್ರದೇಶಗಳಲ್ಲಿ ವಿಷ್ಣು—ವಿಣ್ಣಗರ್—ವಿಷ್ಣುಗೃಹದ ದೇವಾಲಯಗಳನ್ನು ನಿರ್ಮಿಸಿ, ಪೂಜಾ ಮೂರ್ತಿಗಳನ್ನು ಪ್ರತಿಷ್ಠಾಪಿಸಲಾಗಿತ್ತು. ಉದಾಹರಣೆಗೆ ತಡಿಮಾಲಿಂಗಿ ಶಾಸನವು ರವಿಕುಲ ಮಾಣಿಕ್ಯ ವಿಣ್ಣಗರ್ ಆಳ್ವಾರ್ ದೇವಸ್ಥಾನಕ್ಕೆ ಗದ್ದೆಯೊಂದನ್ನು ಮಾರಿದ ಕ್ರಯಪತ್ರದ ವಿವರವನ್ನು ನೀಡುತ್ತದೆ ಈ ವ್ಯವಹಾರದ ಕ್ರಯಪತ್ರವನ್ನು ಶ್ರೀವೈಷ್ಣವರ ರಕ್ಷೆಯಲ್ಲಿ ಇಡಲಾಯಿತು. ಈ ಶಾಸನವು ಮೊದಲನೆ ರಾಜರಾಜಚೋಳನ ಕಾಲಕ್ಕೆ ಸೇರಿದ್ದು, ಈತನ ಇತರೇ ಶಾಸನಗಳೊಂದಿಗೆ ಮೇಲೆ ತಿಳಿಸಿದ ಸ್ಥಳದ ಇಂದಿನ ಜನಾರ್ಧನ ದೇವಾಲಯದ ಮೇಲ್ಭಾಗದ ಇತರೇ ಶಾಸನಗಳೊಂದಿಗೆ ಕಂಡು ಬರುತ್ತದೆ. ಇವುಗಳಲ್ಲಿನ ಒಂದು ಶಾಸನವು ಕ್ರಿ ಶ. 1004-05 ರ ಸಮಯಕ್ಕೆ ಸೇರಿದ್ದು, ಮತ್ತೊಂದು ಸಮಯ ಕ್ರಿ ಶ. 1015-16 ಕ್ಕೆ ಸೇರಿದುದಾಗಿರುತ್ತದೆ. ಅಂದರೆ ಕರ್ನಾಟಕದಲ್ಲಿ ರಾಮಾನುಜರ ಪ್ರವೇಶದ ಒಂದು ಶತಮಾನಕ್ಕೆ ಮುಂಚಿನ ಕಾಲದ್ದಾಗಿದ್ದು, ಆಗಿನ ಶ್ರೀವೈಷ್ಣವರನ್ನು ಕುರಿತದ್ದಾಗಿದೆ.

ವಿಶಿಷ್ಟಾದ್ವೈತದ ಪ್ರಾರಂಭಿಕ ಸಾಹಿತ್ಯವು ನಾಲಾಯಿರ ದಿವ್ಯ ಪ್ರಭಂಧವಾಗಿದ್ದು ಇದು ತಮಿಳು ಹಾಗೂ ಸಂಸ್ಕೃತ ಮಿಶ್ರಣದ ಮಣಿ ಪ್ರವಾಳದಲ್ಲಿದ್ದುದರಿಂದ ಪ್ರಾರಂಭದಲ್ಲಿ ಇದರ ಪ್ರಭಾವವು ಕರ್ನಾಟಕದಲ್ಲಿ ಅಷ್ಟಾಗಿ ಹರಡಿರಲಿಲ್ಲ. ಶ್ರೀವೈಷ್ಣವ ಸಂತರು, ಆಳ್ವಾರುಗಳು ನೂರೆಂಟು ದಿವ್ಯಕ್ಷೇತ್ರಗಳನ್ನು ದರ್ಶಿಸಿ, ಅಲ್ಲಿನ ಪೂಜಿತ ದೈವಗಳನ್ನು ಕುರಿತು, ಭಾವಾವೇಶದಿಂದ ಹಾಡಿದರು. ಆ ನೂರೆಂಟು ದಿವ್ಯಕ್ಷೇತ್ರಗಳಲ್ಲಿ ಕರ್ನಾಟಕದ ಯಾವ ಕ್ಷೇತ್ರವೂ ಸೇರದಿರುವುದು ಒಂದು ವಿಪರ್ಯಾಸ. ಇದಕ್ಕೆ ರಾಜಕೀಯ, ಭಾಷೆಯ ಅಡೆತಡೆಗಳು ಕಾರಣವಾಗಿಲ್ಲದೆಯೂ ಇರಬಹುದು,ಕಾರಣವಾಗಿರಲೂಬಹುದು ಇಂದಿನ ಆಂಧ್ರಪ್ರದೇಶ ಹಾಗೂ ಕೇರಳಗಳು ಈ ದಿವ್ಯಕ್ಷೇತ್ರಗಳಲ್ಲಿ ಕೆಲವನ್ನಾದರೂ ಹೊಂದಿರುವುದು ಈ ಭಾವನೆಗೆ ಇಂಬು ಕೊಡುತ್ತದೆ. ಆ ಆಳ್ವಾರುಗಳು ಕರ್ನಾಟಕದಲ್ಲಿ ಸುತ್ತಾಡದೆ ಇದ್ದುದರಿಂದ ಅವರುಗಳ ಪ್ರಭಾವವು ಅಷ್ಟೊಂದು ಪ್ರಬಲವಾಗಿ ಕರ್ನಾಟಕದ ಮೇಲೆ ಬೀರಲು ಸಾಧ್ಯವಾಗದೆ ಹೋಗಿರಬಹುದು.

ಆದರೂ ಐತಿಹಾಸಿಕ ಸಂಬಂಧವೊಂದರ ಎಳೆಯನ್ನು ನಾವಿಲ್ಲಿ ಕಾಣಬಹುದು

ಅದು ಕಾವೇರಿ ನದಿ

ತಮಿಳರು ಮೊದಲಿನಿಂದಲೂ ಕಾವೇರಿ ನದಿಯನ್ನು ಪವಿತ್ರ ನದಿಯೆಂದು ಭಾವಿಸಿದ್ದರು, ಅಂತೆಯೇ ಕನ್ನಡಿಗರೂ ಕೂಡ. ಈ ನದಿಯು ಈ ರೀತಿಯ ಒಂದು ಸಾಂಸ್ಕೃತಿಕ ಸಂಬಂಧವನ್ನು ಏರ್ಪಡಿಸಿದ್ದರಿಂದ ಕರ್ನಾಟಕ ಹಾಗೂ ತಮಿಳುನಾಡು (ಪಲ್ಲವ, ಚೋಳ) ರಾಜರುಗಳ ನಡುವೆ ಆಗೀಗ ಯುದ್ಧಗಳಾಗುತ್ತಿದ್ದರಿಂದ ಪರಸ್ಪರ ಸಂಪರ್ಕವು ಅಲ್ಪ ಪ್ರಮಾಣದಲ್ಲಿ ಇದ್ದೇ ಇದ್ದಿತು.

ಇಂತಹ ಸಂಬಂಧಗಳ ಪ್ರಭಾವದಿಂದ ಕಾವೇರಿ ನದೀತೀರ, ಅದರ ಅಕ್ಕಪಕ್ಕ ಪ್ರದೇಶಗಳಲ್ಲಿ ಕೆಲವು ಶ್ರೀವೈಷ್ಣವ ಸಂಸಾರಗಳೂ ಇದ್ದು, ಇವರು ನಾಲಾಯಿರ ದಿವ್ಯ ಪ್ರಬಂಧ ಪಠನದಲ್ಲಿ ಸಾಕಷ್ಟು ಅನುಭವವನ್ನು ಪಡೆದಿದ್ದರು. ಅಲ್ಲಿಂದ ಇಲ್ಲಿಗೆ, ಅಲ್ಲಿಗೆ ಹೋಗಿ ಬರುವುದೂ ಪರಸ್ಪರರು ಪರಿಚಯ ಬೆಳೆಸಿಕೊಳ್ಳುವುದೂ — ನಡೆದು ಬಂದ ಸಂಪ್ರದಾಯವಾಗಿತ್ತು.

ದಕ್ಷಿಣ ಭಾರತದ ಧಾರ್ಮಿಕ ಇತಿಹಾಸದಲ್ಲಿ ಅದರಲ್ಲೂ ಶ್ರೀ ವೈಷ್ಣವ ಧಾರ್ಮಿಕ ಇತಿಹಾಸದಲ್ಲಿ ಮೊದಲು ಬರುವುದು ಆಳ್ವಾರರ ಯುಗ ಹನ್ನೆರಡು ಆಳ್ವಾರುಗಳ ನಂತರ ಆಚಾರ್ಯರ ಯುಗ ಪ್ರಾರಂಭವಾಗುತ್ತದೆ.

ಆಳ್ವಾರರ ಯುಗದಲ್ಲಿ ನಾಲಾಯಿರ ದಿವ್ಯ ಪ್ರಬಂಧಗಳು ಕೇವಲ ತಮಿಳುನಾಡೇ ಅಲ್ಲದೆ, ಇಂದಿನ ಕರ್ನಾಟಕದ ಕಾವೇರಿ ಜಲಾನಯನ ಪ್ರದೇಶದಲ್ಲಿಯೂ ನಾಲಾಯಿರ ಪಠನದ ರೂಢಿ



---

'ರಘುಸುತ'

---

ಎಲ್ಲ ಶ್ರೀವೈಷ್ಣವರ ಮನೆಗಳಲ್ಲಿಯೂ ಸಾಮಾನ್ಯ ವಾಗಿತ್ತು. ಇದಕ್ಕೊಂದು ಉದಾಹರಣೆಯನ್ನು ನೀಡಬಹುದು.

ಆಳ್ವಾರುಗಳ ಕಾಲ ಮುಗಿದು ಆಚಾರ್ಯರು ಗಳ ಕಾಲ ಪ್ರಾರಂಭವಾಗುವ ಸಮಯದಲ್ಲಿ ಈ ಎರಡೂ ಯುಗಗಳ ಸೇತುವೆಯಂತೆ ಯಾಮುನಾ ಚಾರ್ಯರ ತಾತನವರಾದ ನಾಥಮುನಿಗಳು ಅವತರಿಸಿದರು. ಅವರು ನಾಲಾಯಿರ ದಿವ್ಯಪ್ರಬಂಧ ಗಳನ್ನು ಸಂಪಾದಿಸಿ ಇಂದು ಇರುವ ಸ್ವರೂಪವನ್ನು ಅವಕ್ಕೆ ನೀಡಿದ ಮಹಾನುಭಾವರು

ಈ ಮಹಾನುಭಾವರಿಗೆ ನಾಲಾಯಿರ ದಿವ್ಯ ಪ್ರಬಂಧಗಳ ಮೊಟ್ಟಮೊದಲ ಪರಿಚಯವಾದುದು ಕೂಡ ಮೇಲ್ನಾಡಿನ ತಿರುನಾರಾಯಣಪುರ (ಮೇಲುಕೋಟೆ) ಪ್ರಾಂತದಿಂದ ಬಂದಿದ್ದ ಕೆಲವು ಶ್ರೀ ವೈಷ್ಣವರ ಮುಖಾಂತರವಾಗಿಯೇನೆ.

ದಿವ್ಯದೇಶಗಳ ದರ್ಶನಕ್ಕೆಂದು ತಮಿಳುನಾಡಿಗೆ ಬಂದಿದ್ದ ಈ ಶ್ರೀವೈಷ್ಣವರು ತಮಿಳುನಾಡಿನ ಆರ್ಕಾಟ್ ಜಿಲ್ಲೆಯಲ್ಲಿನ ಚಿದಂಬರಂ ಬಳಿಯ ಕಾಟ್ಟುಮನ್ನಾರ್ ಕೋಯಿಲ್‌ನಲ್ಲಿಯ ಮನ್ನ ನಾರ್ ಸನ್ನಿಧಿಯಲ್ಲಿ ತಿರುವಾಯ್‌ಮೊಳಿಯ ಕೆಲವು ಸ್ತೋತ್ರಪಾಠಗಳನ್ನು ಅನುಸಂಧಾನ ಮಾಡಿದುದನ್ನು ಆಲಿಸಿದ ಅಲ್ಲಿನ ನಾಥಮುನಿಗಳು ಆನಂದಪರವಶರಾಗಿ ಉಳಿದ ಪಾಶುರಗಳ ಬಗ್ಗೆ ಅನ್ವೇಷಣೆ ಪ್ರಾರಂಭಿಸಿದರು. ತಮಿಳು ನಾಡೇ ಅಲ್ಲದೆ ದಕ್ಷಿಣಾರ್ಧ ಕರ್ನಾಟಕದಲ್ಲಿಯೂ ಸುತ್ತಾಡಿ ಅನ್ವೇಷಣೆ ಕಾರ್ಯವನ್ನು ನಡೆಯಿಸಿ, ನಾಲಾಯಿರ ದಿವ್ಯ ಪ್ರಬಂಧಗಳನ್ನು ಸಂಗ್ರಹಿಸಿ ಮುಂದಿನ ಕಾರ್ಯಕ್ಕೆ ತೊಡಗಿದರು. ನಾಥಮುನಿಗಳ ಕಾಲ ಕ್ರಿ.ಶ. 823-924. ಹೀಗೆ ಕರ್ನಾಟಕದಲ್ಲಿನ ಶ್ರೀ ವೈಷ್ಣವರ ಸಂಸಾರಗಳೊಂದಿಗೆ ತಮಿಳುನಾಡಿನವರ ಸಂಬಂಧ ಬಹಳ ಘನಿಷ್ಠವಾಗತೊಡಗಿ ಒಂದು ನಿರ್ದಿಷ್ಟ ರೂಪವನ್ನು ಪಡೆಯಿತು. ಕೆಲವರು ಪ್ರಕಾಂಡ ಪಂಡಿತರೂ ಆಗಿದ್ದರು. ಅಂತಹವರಲ್ಲಿ ಹೆಸರಿಸ ಬೇಕಾದವರು ಆಂಧ್ರಪೂರ್ಣರು.

ಇಂತಹ ಶ್ರೀವೈಷ್ಣವ ಸಂಸಾರಗಳು ದಕ್ಷಿಣ ಕರ್ನಾಟಕದಲ್ಲಿ ಇದ್ದುದರಿಂದಲೇ ಚೋಳರಾಜನ ಕಾಟಕ್ಕೆ ಶ್ರೀರಾಮಾನುಜರು ಸಿಕ್ಕಿಕೊಂಡಾಗ ಕರ್ನಾಟಕಕ್ಕೆ ಆಗಮಿಸಿದರು. ಆಗ ಚೇರ (ಕೇರಳ) ದೇಶವಾಗಲಿ, ಪೂರ್ವ ಚಾಳುಕ್ಯ (ಆಂಧ್ರ) ಪ್ರದೇಶವಾಗಲಿ 'ಸುಕ್ಷೇಮ' ವೆಂದು ಅವರು ಭಾವಿಸಿರದಿದ್ದರಿಂದಲೆ, ಅವರು ಕರ್ನಾಟಕಕ್ಕೆ ಬರುವಂತಾಯಿತು.

## ರಾಮಾನುಜರ ಪ್ರವೇಶ :-

ರಾಮಾನುಜರು ಕರ್ನಾಟಕದಲ್ಲಿ ಸುಮಾರು 13 ವರ್ಷಗಳ ಕಾಲ (ಕ್ರಿ. ಶ. 1138 ರಿಂದ 1150 ರವರೆಗೆ) ನೆಲೆಸಿದ್ದರು. ಇವರು ಸಾಲಿ ಮಕ್ಕೆ ಬಂದಾಗ ಇವರಲ್ಲಿನ ದೈವತ್ವವನ್ನು ಕ ತಮ್ಮ ಗುರುಗಳಾಗಿ ಸ್ವೀಕರಿಸಿದವರು ಆ ಆಂಧ್ರಪೂರ್ಣರು. ರಾಮಾನುಜರು ಕರ್ನಾ ದಲ್ಲಿ ಇರುವಷ್ಟು ಕಾಲವೂ ಅವರನ್ನು ನೆರಳ ಆಶ್ರಯಿಸಿ ಅವರ ಪ್ರಿಯಶಿಷ್ಯರಾಗಿದ್ದ ಆಂ ಪೂರ್ಣರಾಗಿದ್ದ ವಡುಹ ನಂಬಿಯವರು ಇಲ್ಲಿದ್ದ ವೈಷ್ಣವ ಮನೆತನಗಳ ಪ್ರತಿನಿಧಿಯಾಗಿದ್ದ ಇವರ ಕಾರಣದಿಂದಲೇ ಅತ್ಯಂತ ಪವಿತ್ರ ಪೂಜನೀಯವೂ ಆದ ಶ್ರೀಪಾದ ತೀರ್ಥವು ಸ ಗ್ರಾಮದಲ್ಲಿ ಇಂದಿಗೂ ಇದ್ದು ಅನೇಕ ಶ್ರೀವೈ ರಿಗೆ ಈ ಕಾರಣದಿಂದಲೇ ದಿವ್ಯಕ್ಷೇತ್ರವಾಗಿದೆ.

ತಮಿಳುನಾಡು ದೇವಾಲಯಗಳಲ್ಲಿನ ಪ ಯನ್ನೆ ರಾಮಾನುಜರು ಕರ್ನಾಟಕದಲ್ಲಿ ಇಲ್ಲಿನ ದೇವಾಲಯಗಳಲ್ಲೂ ರೂಢಿಗೆ ತಂದ ತಿರುವಾಯ್ಮೊಳಿ ಇತ್ಯಾದಿ ದಿವ್ಯ ಪ್ರಬಂಧಗಳ ವಿಷ್ಣು ದೇವಾಲಯಗಳಲ್ಲಿ ಪಠಿಸುವುದರ ಮುಖ ತರ ದೇವತಾರಾಧನೆ ಮಾಡುವ ರೀತಿಯ ರಾಮಾನುಜರು ರೂಢಿಗೆ ತಂದರು. ಇಂದಿ ಕರ್ನಾಟಕದ ಅನೇಕ ವಿಷ್ಣು ದೇವಾಲ ಳಲ್ಲಿ ಇದೇ ರೂಢಿ ಇದೆ.

ಇದರ ಪರಿಣಾಮವಾಗಿ ಇಂದಿನಂತೆ ಅಂದೂ ಕೂಡ ಶ್ರೀ ಆಂಡಾಳ್‌ರವರ ತಿರುಪ್ಪಾ ಇಲ್ಲಿನ ಧಾರ್ಮಿಕ ಜೀವನದಲ್ಲಿ ಪ್ರಮುಖ ಸ್ಥಾ ವನ್ನು ಪಡೆದಿತ್ತು. ಮಾರ್ಗಳಿ ಮಾಸವ ಆಂಡಾಳ್ ತಿಂಗಳು ಎಂಬುದಾಗಿ ಕರೆಯುವು ರೂಢಿ. ಆ ಕಾಲದಲ್ಲಿ ಕರ್ನಾಟಕದಲ್ಲಿನ ಎಲ್ಲ ವೈಷ್ಣವ ದೇವಾಲಯಗಳಲ್ಲೂ ತಿರುಪ್ಪಾವೈ ಪಾ ರಗಳನ್ನು ಬೆಳಗಿನ ಜಾವ ಹೇಳಿ, ಪೂಜೆ ಮಾಡ ಪದ್ಧತಿಯ ಅಂದಿನಿಂದಲೇ ರೂಢಿಗೆ ಬಂದಿ ಅಂತೆಯೇ ಶ್ರೀವೈಷ್ಣವರ ಮನೆಗಳಲ್ಲಿ ಆಂಡಾ ರವರ ಜನ್ಮದಿನವಾದ ತಿರುವಾಡಿಪ್ಪೂರಂ ಅ ಹಬ್ಬವನ್ನಾಗಿ ಆಚರಿಸಲಾಗುತ್ತಿದೆ.

ಆಂಡಾಳ್ ಕೃತಿಗಳನ್ನು ಅಮಿತವಾಗಿ ಕೊಂಡ ರಾಮಾನುಜರಿಂದಾಗಿ ಆಕೆಯ 'ಪೆರಂಬೂದೂರಿನ ಮಾಮುನಿಕ್ಕುಪ್ಪಿನ್ನಾನಾ ಎಂದು ಕರೆಯುವುದು ರೂಢಿ. ಅಂದರೆ ಆಂಡಾ ರವರನ್ನು ಶ್ರೀಮದ್ರಾಮಾನುಜರ ತಂಗಿ ಎಂ ಕರೆದಂತಾಯಿತು. ಇದಕ್ಕೆ ಕಾರಣ ರಾಮಾನುಜ ಆಂಡಾಳ್ ರವರ ಕೃತಿಗಳಲ್ಲಿನ ದೈವ ಪ್ರೇಮ ದೈವ ಸಾಕ್ಷಾತ್ಕಾರಕ್ಕಾಗಿ ಆಕೆ ನಡೆಸಿದ ತಪಸ್ಸು ಇತ್ಯಾದಿಗಳನ್ನು ತುಂಬು ಚೆನ್ನಾಗಿ ಅರಿತಿದ್ದು ಆಗಿತ್ತು.

ಇದರಿಂದ ರಾಮಾನುಜರು ಹೋದ ಕಡೆ ಲ್ಲೆಲ್ಲ ಆಂಡಾಳ್‌ರವರ ಕೃತಿ ಪಠನದ ವ್ಯವ

ಯನ್ನು ತಪ್ಪದೆ ಮಾಡುತ್ತಿದ್ದರು. ಇದು ಕರ್ನಾಟಕದಲ್ಲೂ ರೂಢಿಗೆ ಬಂದಿತು.

## ಶಾಸನಗಳಲ್ಲಿ ಆಂಡಾಳ್

ಕರ್ನಾಟಕದಲ್ಲಿ ಆಂಡಾಳ್ ಪ್ರಭಾವದ ಬಗ್ಗೆ ಬಹಳ ಕಡಿಮೆ ಶಾಸನಾಧಾರಗಳಿವೆ. ಇರುವ ಹೇಳಿಕೆಗಳೂ ಕೂಡ ನೇರವಾಗಿ ಆಂಡಾಳ್‌ಗೇ ಅನ್ವಯಿಸುವಂತಿಲ್ಲ.

ಕ್ರಿ. ಶ. 1152 ರ ತೊಂಡನೂರಿನ ಶಾಸನವೇ ಅತ್ಯಂತ ಪ್ರಾಚೀನ ಶಾಸನವಾಗಿದೆ. ಇದು ನೇರವಾಗಿ ಆಂಡಾಳ್‌ರವರ ಹೆಸರನ್ನು ಹೇಳುವುದಿಲ್ಲ. ಬೇರೆ ವ್ಯಕ್ತಿಯ ಹೆಸರನ್ನು ಹೇಳುತ್ತದೆ. ಇದು ಸಿಂಗಪ್ಪೆರುಮಾಳ್ ದೇವಾಲಯದಲ್ಲಿರುವ ಕೃಷ್ಣನ ಗುಡಿಯಲ್ಲಿ 'ಶ್ರೀ ಜಯಂತಿ' ಉತ್ಸವವನ್ನು ಆಚರಿಸಲು ನೀಡಿದ ಧನದಾನದ ಶಾಸನವಾಗಿದೆ. ಇದು ಮಟ್ಟಿಯಂ ಬಾಕ್ಕಣನ ಆಂಡಾಳ್ ಎನ್ನುವಾಕೆಯು ನೀಡಿದ ದಾನವಾಗಿದೆ. ಈಕೆಯು ಇಳೆಯಭಿ ರಾಮನ್ ಭಟ್ಟನ್ ಎನ್ನುವಾತನ ಪತ್ನಿ (ನಂಗೈ) ಆಗಿರುವಳಂತೆ

ಈ ಆಂಡಾಳ್ ಎನ್ನುವಾಕೆಯ ಬಗ್ಗೆ ಕ್ರಿ. ಶ. 1136 ಮತ್ತೊಂದು ಶಾಸನದಲ್ಲೂ ಉಲ್ಲೇಖವಿದೆ. ಬಹುಶಃ ಈಕೆ ತಮಿಳುನಾಡಿನಿಂದ ಇಲ್ಲಿ ಬಂದು ನೆಲಸಿದ್ದಿರಬಹುದು.

ಆಂಡಾಳ್ ಎನ್ನುವ ಹೆಸರು ಶ್ರೀವೈಷ್ಣವರಲ್ಲಿ ತುಂಬಾ ಜನಪ್ರಿಯವಾಗಿರುವುದರಿಂದ, ಅಂತಹ ಒಬ್ಬಾಕೆಯ ಹೆಸರು ಮೇಲಿನ ಎರಡೂ ಶಾಸನಗಳಲ್ಲಿ ಕಂಡು ಬಂದಿರಬೇಕು ಹೊರತು, ಆಳ್ವಾರ್ ಆಗಿರುವ ಆಂಡಾಳ್‌ರವರದ್ದಲ್ಲ ಎಂದು ನಿಸ್ಸಂದೇಹವಾಗಿ ಹೇಳಬಹುದು.

ಮೇಲೆ ತಿಳಿಸಿರುವ ಕೃಷ್ಣದೇವಾಲಯದ ಪ್ರಾಕಾರದ ಗೋಡೆಯ ಮೇಲೆ ಕೆತ್ತಿರುವ ಮತ್ತೊಂದು ಶಾಸನದಲ್ಲಿ ಮತ್ತೊಬ್ಬದಾನಿಯ ಹೆಸರಿದೆ. ಕೊಡಿಯ–ಆಂಡಾಳ್–ಅಮ್ಮೈ ಎನ್ನುವಾಕೆಯು ತೊಂಡನೂರಿನಲ್ಲಿರುವ ತೂತ್ತಾಂಡಿ ವಿನ್ನಗರಂ (ಯಾದವ ನಾರಾಯಣ ಚತುರ್ವೇದಿ ಮಂಗಲಂ) ದೇವಾಲಯದಲ್ಲಿನ ವಿರ್ರಿರುಂದ ಪೆರುಮಾಳ್‌ಗೆ ಮಾಡಿದ ದಾನ ಶಾಸನವಿದು.

ಈ ಶಾಸನವು ಸುಮಾರು ಕ್ರಿ. ಶ. 12ನೇ ಶತಮಾನಕ್ಕೆ ಸೇರಿದುದೆಂದು ಅಂದಾಜು ಮಾಡಲಾಗಿದೆ ಇಲ್ಲಿಯ ದಾನಿಯ ಹೆಸರೂ ವಿಚಿತ್ರವಾದುದು ಇದೂ ಯಾವುದೋ ವ್ಯಕ್ತಿಯ ಹೆಸರಾಗಿದೆಯೇ ಹೊರತು ಆಳ್ವಾರ್ ಆಗಿರುವ ಆಂಡಾಳ್‌ರವರ ಹೆಸರನ್ನು ಸೂಚಿಸುವುದಿಲ್ಲ.

ಆದರೆ ಒಂದಂತೂ ಸತ್ಯ. ಇದು ಶ್ರೀಆಂಡಾಳ್ ಹೆಸರಿನ ಸಹಯೋಗದ ಜನಪ್ರಿಯತೆಯನ್ನು ಎತ್ತಿ ತೋರಿಸುತ್ತದೆ.

ಇವೆಲ್ಲಕ್ಕಿಂತ ಮುಖ್ಯವಾದದು ಹಾಗೂ ಗಮನಾರ್ಹವಾದ ಮತ್ತೊಂದು ಅಂಶವೆಂದರೆ-ಈ ಎಲ್ಲ ಶಾಸನಗಳೂ ತಮಿಳು ಭಾಷೆಯಲ್ಲಿವೆ

ಮತ್ತೂ ಒಂದು ವಿಶೇಷವೆಂದರೆ ತಮಿಳುನಾಡಿನಲ್ಲಿಯೂ ಕೂಡ ಈ ಆಳ್ವಾರ್ ರವರಿಗೆ (ಆಂಡಾಳ್‌ಗೆ) ಅನ್ವಯಿಸುವಂತಹ ಶಾಸನಾಧಾರಗಳು ಕಡಿಮೆ ಸಂಖ್ಯೆಯಲ್ಲಿವೆ.

ಶ್ರೀವಿಲ್ಲಿಪುತ್ತೂರಿನಲ್ಲಿಯೂ ಕೂಡ ಕ್ರಿ ಶ. 13 ನೇ ಶತಮಾನದವರೆಗೂ ಆಂಡಾಳ್ ದೇವಾಲಯಕ್ಕೆ ಅನ್ವಯಿಸುವಂತಹ ಯಾವುದೇ ಶಾಸನಾಧಾರವೂ ಇಲ್ಲ. ಅಲ್ಲಿನ ದೇವಾಲಯವನ್ನೂ ಕೂಡ ಕ್ರಿ ಶ 14 ನೇ ಶತಮಾನದಲ್ಲಿ ಮಹಾಬಲಿ ಬಾಣಾಧಿರಾಜನು ಮಹಾಮಂಟಪ, ಅರಾಧನಾ ಮಂಟಪ ಗರ್ಭಗುಡಿಗಳನ್ನು ನಿರ್ಮಿಸುವುದರ ಮುಖಾಂತರ ಪೂರ್ಣಗೊಳಿಸಿದನು.

ಈ ಸಂಬಂಧದಲ್ಲಿ ಒಂದು ವಿಷಯವನ್ನು ಸ್ಪಷ್ಟಪಡಿಸಬೇಕಾಗಿದೆ. ಸಾಮಾನ್ಯವಾಗಿ ಶಿಲಾಶಾಸನಗಳು ವಾಸ್ತವ ಹೇಳಿಕೆಗಳನ್ನು ಹೊಂದಿರುತ್ತವೆ. ಅವುಗಳಲ್ಲಿ ಅಂದಿನ ಕಾಲದ ಸಾಮಾಜಿಕ ಹಾಗೂ ಧಾರ್ಮಿಕ ಪರಿಸ್ಥಿತಿಗಳ ಬಗ್ಗೆ ಏನನ್ನೂ ಹೇಳಿರುದಿಲ್ಲ ಹಾಗೇನಾದರೂ ತಿಳಿಸಬೇಕಾದಲ್ಲಿ ನೇರವಾಗಿಯೆ ತಿಳಿಸುತ್ತವೆಯೇ ಹೊರತು, ಬೇರೆ ರೀತಿಯಲ್ಲಿ, ಮಾರ್ಗದಲ್ಲಿ ತಿಳಿಸುವುದಿಲ್ಲ.

ಆದುದರಿಂದ ಆಂಡಾಳ್‌ರವರ ಬಗ್ಗೆ ನೇರವಾಗಿ ಈ ಶಿಲಾಶಾಸನಗಳಲ್ಲಿ ಹೇಳಿರುತ್ತಾರೆಂಬುದನ್ನು ನಿರೀಕ್ಷಿಸಬಾರದು.

ಆದರೆ ಅಂತಹ ಶಾಸನಾಧಾರಗಳಿಂದ ಕೆಲವೊಂದು ಸೂಕ್ತ ನಿರ್ಣಯಗಳಿಗೆ ತಲುಪಲು ಸಾಧ್ಯವಾಗುತ್ತದೆ.

ಉದಾಹರಣೆಗೆ ಶ್ರೀರಂಗದಲ್ಲಿ ಕ್ರಿ. ಶ. 1126 ಕ್ಕೆ ಸಂಬಂಧ ಪಟ್ಟಂತಹ ಚೋಳ ದೊರೆಯಾದ ವಿಕ್ರಮ ಚೋಳನ ಒಂದು ಶಾಸನವಿದೆ. ಇದರಲ್ಲಿ ಶಾಂಡೂರ್ ಮಹಿಲಾಲಂಕಾರದಾಸನ್ ಮತ್ತು ಅವನ ತಮ್ಮನು 'ಕೋದೈ ಆಂಡಾಳ್ ತಿರುನಂದಾವನಂ' ಎಂದು ಕರೆಯಲ್ಪಡುವ ಉದ್ಯಾನವನಕ್ಕೆ ಬದಲಾಗಿ ಪೆರಿಯ ಕೋಯಿಲ್ ಪ್ರಿಯರ್ ಎನ್ನುವರಿಂದ ಸ್ವಲ್ಪ ಜಮೀನನ್ನು ಪಡೆದರು ಎಂಬುದಾಗಿ ತಿಳಿಸಲಾಗಿದೆ.

ಅಂದರೆ ಕ್ರಿ ಶ 12 ನೇ ಶತಮಾನದಷ್ಟು ಹೊತ್ತಿಗೆ ಶ್ರೀ ಆಂಡಾಳ್ ಎಷ್ಟೊಂದು ಜನಪ್ರಿಯಳಾಗಿದ್ದಳೆಂದರೆ ಉದ್ಯಾನವನಗಳೂ ಕೂಡ ಆಕೆಯ ಹೆಸರಿನಲ್ಲಿ ಇರತೊಡಗಿದವು. ಖ್ಯಾತ ಶಾಸನ ತಜ್ಞರಾದ ಡಾ|| ಬಾ. ರಾ. ಗೋಪಾಲ್‌ರವರ ಅಭಿಪ್ರಾಯದಲ್ಲಿ ತಮಿಳು ನಾಡಿನಲ್ಲಿ ಶ್ರೀ ಆಂಡಾಳ್‌ಳನ್ನು ಕುರಿತಾದ ಅತ್ಯಂತ ಪ್ರಾಚೀನ ಶಿಲಾ ಶಾಸನ ದಾಖಲೆಯು ಇದೇ ಆಗಿದೆ. ಅಂತೆಯೆ ಆಕೆಯನ್ನು ಕುರಿತಾದ ಮೊಟ್ಟ ಮೊದಲನೆಯ ಶಿಲಾ ಶಾಸನವಿದು

ಇದಾದ ದಶಕಗಳ ನಂತರ ಕರ್ನಾಟಕದಲ್ಲಿನ ಶಾಸನಗಳಲ್ಲಿ ಮೇಲೆ ತಿಳಿಸಿರುವಂತಹ ಹೆಸರು ಕಂಡು ಬಂದಿತು.

ಈ ದೃಷ್ಟಿಯಿಂದ ನೋಡಿದರೆ ಮೂರನೆಯ ಕುಲೋತ್ತುಂಗನ ಶಾಸನವೊಂದು ಪ್ರಮುಖ ಸ್ಥಾನವನ್ನು ಪಡೆದಿದೆ ಆದರೆ ಇದು ಯಾವ ಇಸವಿಗೆ ಸೇರಿದ್ದೆಂಬುದು ಗೊತ್ತಾಗಿಲ್ಲ. ಓರ್ವದಾನಿಯು ದೇವರ ಪೂಜೆಗಾಗಿ ಶೂಡಿಕ್ಕುಡುತ್ತಾಳ್ ಎನ್ನುವ ಹೂದೋಟವನ್ನು ಬೆಳೆಸಿ, ಹೂಗಳನ್ನು ಅರ್ಪಿಸುವುದಕ್ಕಾಗಿ ಭೂಮಿಯನ್ನು ದಾನ ಮಾಡಿದ್ದಾನೆ.

ಈ ಶಾಸನದಲ್ಲಿ ತಿಳಿಸಿರುವ ಶೂಡಿಕ್ಕುಡುತ್ತಾಳ್ ಎನ್ನುವ ಪ್ರಯೋಗವು ಶ್ರೀಆಂಡಾಳ್‌ಗೇ ಅನ್ವಯವಾಗುತ್ತದೆ. ಶ್ರೀವಿಲ್ಲಿಪುತ್ತೂರಿನ ವಟಪತ್ರಶಾಯಿಗೆ ತಾನು ಮುಡಿದ ಹೂಮಾಲೆಯನ್ನು ನೀಡುತ್ತಿದ್ದುದರಿಂದ ಆಂಡಾಳ್‌ಗೆ ಶೂಡಿಕ್ಕುಡುತ್ತ ನಾಚ್ಚಿಯಾರ್ (ಮುಡಿದುಕೊಟ್ಟ ನಾಯಕಿ) ಎನ್ನುವ ಹೆಸರು ಬಂದಿತು.

ಈಕೆಯೇ ಅಲ್ಲದೆ ಉಳಿದ ಆಳ್ವಾರುಗಳ ಪೂಜೆಯೂ ಕೂಡ ಪ್ರತಿದೇವಾಲಯದಲ್ಲಿ ನಡೆಸುವಂತೆ ಮಾಡಿ, ಅದನ್ನು ಜನಪ್ರಿಯಗೊಳಿಸಿದವರು ಶ್ರೀರಾಮಾನುಜರೇ ಎಂಬುದನ್ನು ನೆನಪಿನಲ್ಲಿಡಬೇಕಾದುದು ಅಗತ್ಯ, ಇದು ಕರ್ನಾಟಕದ ದೇವಾಲಯಗಳಿಗೂ ಅನ್ವಯವಾಗುತ್ತದೆ.

ವಿಜಯನಗರದ ದೊರೆ ಸದಾಶಿವರಾಯನ ಕ್ರಿ. ಶ 1564 ರ ಶಾಸನವೊಂದಿದೆ. ಇದು ಕನ್ನಡದಲ್ಲಿದೆ. ಕೊಪ್ಪಲುಗಳ ಸಮೇತದ ಹಳ್ಳಿಯೊಂದನ್ನು ಮೇಲುಕೋಟೆಯ ಚೆನ್ನಿಗರಾಯನ ದೇವಾಲಯಕ್ಕೆ ಆಳ್ವಾರುಗಳ ತಿರುನಕ್ಷತ್ರ ಹಾಗೂ ಚೂಡಿಕುಡುತ್ತ ನಾಚ್ಚಿಯಾರ್‌ರವರ ತಿರುನಕ್ಷತ್ರದ ಉತ್ಸವಗಳಿಗಾಗಿ ದಾನಮಾಡಿರುವ ವಿಷಯವನ್ನು ತಿಳಿಸುತ್ತದೆ.

## ಶಿಲ್ಪಕೃತಿ ಅಥವಾ ದೇವಾಲಯಗಳಲ್ಲಿ ಆಂಡಾಳ್ :

ಅನೇಕ ಉಪಭಾಗಗಳೂ ಹಾಗೂ ಗುಡಿಗಳಿಂದ ಕೂಡಿದ ದೇವಾಲಯವು ಕರ್ನಾಟಕದಲ್ಲಿ ಸಂಕೀ

ರ್ಣವಾಗಿ ರೂಪುಗೊಂಡದ್ದು ಹಾಗೂ ಬೆಳವಣಿಗೆ ಯಾದುದು ವಿಜಯನಗರದರಸರ ಕಾಲದಲ್ಲಿ ಎಂಬುದನ್ನು ನಾವೆಲ್ಲ ನೆನಪಿಡಬೇಕು. ಇದಕ್ಕೆ ಮುಂಚೆ ಈ ಪದ್ಧತಿ ರೂಢಿಯಲ್ಲಿರಲಿಲ್ಲ. ಈ ದೊರೆಗಳು ಹೊಸದೇವಾಲಯಗಳನ್ನು ಹೆಚ್ಚಾಗಿ ನಿರ್ಮಿಸಲಿಲ್ಲವಾದರೂ, ಅದುವರೆವಿಗೂ ಪ್ರಚಲಿತವಾಗಿದ್ದ ಪ್ರಾಚೀನ ದೇವಾಲಯಗಳನ್ನು ಸಂರಕ್ಷಿಸಿ, ಅವುಗಳಿಗೆ ಪುಟ್ಟ ಹಾಗೂ ಇತರೇ ದೇವಾಲಯಗಳ ಜೋಡಣೆ ಕಾರ್ಯವನ್ನು ಅನುಸರಿಸಿದರು.

ಕರ್ನಾಟಕದಲ್ಲಿ ಪರಿವಾರ ದೇವತೆಗಳು ಮತ್ತಿತರ ದೇವತೆಗಳಿಗಾಗಿ ಬೇರೆಬೇರೆಯಾದ ಗುಡಿಗಳನ್ನು ಕಟ್ಟುವ ಕಲ್ಪನೆಯು ವಿಜಯನಗರದರಸರ ಕಾಲದ ಒಂದು ನೂತನ ಅನ್ವೇಷಣೆಯಾಗಿತ್ತು.

ದೇವಾಲಯದ ಗರ್ಭಗುಡಿಯನ್ನು ಸುತ್ತುವರೆದಿರುವ ಹೊರವಲಯ ಮಂಟಪಗಳಲ್ಲಿ ಆಳ್ವಾರರುಗಳ ಶಿಲಾವಿಗ್ರಹಗಳನ್ನು ಪ್ರತಿಷ್ಠಾಪಿಸುವುದನ್ನು ವಿಜಯನಗರದ ಅರಸರ ಕಾಲದಿಂದ ರೂಢಿಗೆ ಬಂದಿರುವುದನ್ನು ಕಾಣುತ್ತೇವೆ.

ಇದೇ ರೀತಿಯಲ್ಲಿ ಶೈವ ದೇವಾಲಯಗಳಲ್ಲೂ ನಾಯನಾರ್‌ಗಳ ವಿಗ್ರಹಗಳನ್ನು ಪ್ರತಿಷ್ಠಾಪಿಸುವ ರೂಢಿ ಉಂಟು.

ಆಂಡಾಳ್ ಗುಡಿಗಳಿಗೆ ಸಂಬಂಧಪಟ್ಟಂತೆ ಕರ್ನಾಟಕದಲ್ಲಿನ ಅತ್ಯಂತ ಪ್ರಾಚೀನ ಹಾಗೂ ಪ್ರಾರಂಭಿಕ ಉದಾಹರಣೆಯನ್ನು ಬೇಲೂರಿನ ಚೆನ್ನಕೇಶವ ದೇವಾಲಯದಲ್ಲಿ ಕಾಣಬಹುದು. ಇಲ್ಲಿ ಆಂಡಾಳ್ ಗುಡಿಯಿದೆ.

ಸುಮಾರು ಕ್ರಿ. ಶ. 14 ನೇ ಶತಮಾನದ ಅಂತ್ಯದಲ್ಲಿ ಅಂದರೆ ಕ್ರಿ. ಶ. 1397 ರಲ್ಲಿ ಚೆನ್ನಕೇಶವನ ಪ್ರಧಾನ ದೇವಾಲಯದ ಹಿಂಭಾಗದಲ್ಲಿ ಹೊಯ್ಸಳ ದೇವಾಲಯಗಳ ನಿರ್ಮಾಣಗಳ ನಂತರ ತ್ಯಜಿಸಿದ ಶಿಲಾಭಾಗಗಳನ್ನು ಉಪಯೋಗಿಸಿ ಕೊಂಡು ಮೂರು ಮುಖ್ಯ ಸ್ಮಾರಕಗಳನ್ನು ನಿರ್ಮಿಸಲಾಯಿತು. ಇವುಗಳಲ್ಲಿ ಆಂಡಾಳ್ ದೇವಾಲಯವೂ ಒಂದು.

ಈ ದೇವಾಲಯವು ಚೆನ್ನಕೇಶವ ದೇವಾಲಯದ ವಾಯುವ್ಯದಿಕ್ಕಿನಲ್ಲಿದೆ. ಇದರಲ್ಲಿನ ಕೆತ್ತನೆಗಳು ಹಾಗೂ ನಿರ್ಮಾಣ ಶೈಲಿಯು ಖಂಡಿತವಾಗಿಯೂ ವಿಜಯನಗರ ಕಾಲಕ್ಕೆ ಸೇರಿರುವುದು.

ಆದರೆ ಈ ದೇವಾಲಯದ ಗೋಡೆಗಳು ಹಾಗೂ ತಳಪಾಯಗಳು ಹೊಯ್ಸಳ ಕುಶಲ ಕರ್ಮಿಗಳ ಸುಂದರ ಶಿಲ್ಪ ವಿನ್ಯಾಸಗಳಿಂದ ಅಲಂಕೃತವಾಗಿವೆ. ಪ್ರಧಾನ ದೇವಾಲಯದ ಶಿಲ್ಪ ಸೌಂದರ್ಯವನ್ನು ಇವು ಪಡೆದಿಲ್ಲ.

ಇದೇ ರೀತಿಯಲ್ಲಿ ತಿರುಮುಕೂಡಲ ನರಸೀಪುರದಲ್ಲಿನ ಗುಂಜಾ ನರಸಿಂಹ ಸ್ವಾಮಿ ದೇವಾಲಯದ ಆವರಣದಲ್ಲಿ ಆಂಡಾಳ್ ಗುಡಿಯೊಂದನ್ನು ಕಾಣುತ್ತೇವೆ. ಇದು ವಿಜಯನಗರದ ಕೃಷ್ಣದೇವರಾಯನ ಕಾಲಕ್ಕೆ ಸೇರಿದುದು.

ಸಾಲಿಗ್ರಾಮದಲ್ಲಿನ ಯೋಗ ನರಸಿಂಹಸ್ವಾಮಿ ದೇವಾಲಯದಲ್ಲಿ, ನಂತರದ ವಿಜಯನಗರ ಕಾಲಕ್ಕೆ ಸೇರಿದ ಆಂಡಾಳ್ ಶಿಲಾವಿಗ್ರಹವಿದೆ

ತೆರಕಣಾಂಬಿಯಿಂದ ನಾಲ್ಕು ಮೈಲಿ ದೂರದಲ್ಲಿ 'ಹುಲಿಗನ ಮರಡಿ' ಎನ್ನುವ ಒಂದು ಸಣ್ಣ ಬೆಟ್ಟವಿದೆ. ಇಲ್ಲಿ ವೆಂಕಟರಮಣ ದೇವಾಲಯವಿದೆ. ಇಲ್ಲಿನ ನವರಂಗದಲ್ಲಿ ಎಡಗಡೆಗೆ ಪುಟ್ಟ ಮಂಟಪದಲ್ಲಿ ಎಡಗಡೆಗೆ ಒಂದು ಸ್ತ್ರೀ ದೇವತೆಯು ಪದ್ಮಾಸನದಲ್ಲಿ ಕುಳಿತಿರುವಂತಿದೆ. ಅದನ್ನು ಗೋದಾದೇವಿಯ ವಿಗ್ರಹವೆನ್ನುತ್ತಾರೆ.

ಆದರೆ ಸಾಮಾನ್ಯವಾಗಿ ಗೋದಾದೇವಿಯ ವಿಗ್ರಹವು ನಿಂತಿರುವ ಭಂಗಿಯಲ್ಲಿದ್ದು ಕೈನಲ್ಲಿ ಕಮಲ ಪುಷ್ಪವನ್ನು ಹಿಡಿದಿರುವುದು ಕಂಡು ಬರುತ್ತದೆ. ಈ ವಿಗ್ರಹವು ಆ ಭಂಗಿಯಲ್ಲಿ ಇಲ್ಲದಿರುವುದರಿಂದ ಅನುಮಾನಾಸ್ಪದವಾಗಿದೆ.

ಇಲ್ಲಿನ ಮತ್ತೊಂದು ಕುತೂಹಲಕಾರಿ ಹಾಗೂ ಗಮನಾರ್ಹ ವಿಷಯವೆಂದರೆ ಈ ದೇವಾಲಯದಲ್ಲಿನ ಮತ್ತೊಂದು ಮಂಟಪದಲ್ಲಿ ಆಳ್ವಾರರುಗಳ ಹಾಗೂ ಆಚಾರ್ಯರುಗಳ ವಿಗ್ರಹಗಳನ್ನು ಕಾಣುತ್ತೇವೆ. ಯಾವುದೇ ಶ್ರೀವೈಷ್ಣವ ದೇವಾಲಯದಲ್ಲೂ ಈ ರೀತಿಯ ಇಷ್ಟೊಂದು ಸಂಖ್ಯೆಯ ವಿಗ್ರಹಗಳಿಲ್ಲ.

ಗುಂಡ್ಲುಪೇಟೆಯಲ್ಲಿರುವ ಪರವಾಸು ದೇವಾಲಯವು ಇತ್ತೀಚಿನ ಕರಿಶಿಲೆಯಿಂದ ನಿರ್ಮಾಣವಾದುದಾಗಿದೆ. ಈ ದೇವಾಲಯದ ನವರಂಗದಲ್ಲಿದ್ದ ಆಂಡಾಳ್ ವಿಗ್ರಹವನ್ನು ನಂತರ ಇಲ್ಲಿನ ವಿಜಯ ನಾರಾಯಣ ದೇವಾಲಯದ ನವರಂಗಕ್ಕೆ ಸ್ಥಳಾಂತರಿಸಲಾಯಿತು.

ಇವಲ್ಲದೆ, ಈ ಸಂತಳಿಗಾಗಿ ಪ್ರತ್ಯೇಕವಾದ ದೇವಾಲಯವನ್ನು ನಿರ್ಮಿಸಿರುವ ಉದಾಹರಣೆಗಳಿವೆ

ಇಂತಹ ದೇವಾಲಯಗಳು ಹೊಳೆ ನರಸೀಪುರದ ಲಕ್ಷ್ಮೀನಾರಾಯಣ ದೇವಾಲಯ, ಶ್ರೀರಂಗಪಟ್ಟಣದ ನರಸಿಂಹಸ್ವಾಮಿ ದೇವಾಲಯ, ಗುಂಡ್ಲುಪೇಟೆಯ ಪರವಾಸುದೇವಾಲಯ ಮತ್ತು ಕಳಲೆಗಳಲ್ಲಿವೆ.

ಹೊಳೆನರಸೀಪುರದಲ್ಲಿನ ಆಂಡಾಳ್ ಯನ್ನು ಪ್ರಧಾನ ದೇವಾಲಯದ ಆ (ಪ್ರಾಕಾರ)ದಲ್ಲಿ ನಿರ್ಮಿಸಲಾಗಿದೆ. ಇ ಕ್ರಿ. ಶ 1687 ರಲ್ಲಿ ಸ್ಥಳೀಯ ಪಾಳೆಯ ನಾದ ರಂಗಪ್ಪನಾಯಕನು ನಿರ್ಮಿಸಿದನು. ಪ್ರಧಾನ ದೇವಾಲಯವು ಚಾಲುಕ್ಯ ಶೈಲಿಯ

ಶ್ರೀರಂಗಪಟ್ಟಣದಲ್ಲಿನ ನರಸಿಂಹ ಸ್ವಾ ದೇವಾಲಯದ ಪ್ರಾಕಾರದಲ್ಲಿ ನಾಲ್ಕೂ ಮ ಗಳಲ್ಲಿ ಆಳ್ವಾರರುಗಳ ಹಾಗೂ ಆಂಡಾಳ್‌ರ ಗಳ ಗುಡಿಗಳು ಬೇರೆ ಬೇರೆಯಾಗಿಯೇ ನಿರ್ಮಾ ವಾಗಿವೆ. ಇವು ಕ್ರಿ. ಶ. 17 ನೇ ಶತಮಾ ಸೇರಿದ ನಿರ್ಮಾಣಗಳಾಗಿವೆ.

ಕಳಲೆಯಲ್ಲಿನ ಆಲಯವೂ ಕೂಡ ಇತ್ತೀ ದಾಗಿದ್ದು ಗರ್ಭಗುಡಿ, ಸುಖನಾಸಿ, ಮುಖಮ ಹಾಗೂ ಪಾತಾಳಾಂಕಣಗಳನ್ನು ಹೊಂ ಪೂರ್ಣರೂಪದ ದೇವಾಲಯದ ಪ್ರ ಯಂತಿದೆ.

ಈ ರೀತಿಯಲ್ಲಿ ಶ್ರೀ ಆಂಡಾಳ್ ಕರ್ನಾಟ ಧಾರ್ಮಿಕ ಜೀವನದಲ್ಲಿ ಇಂದಿಗೂ ಹ ಹೊಕ್ಕಾಗಿ ಆಕೆಯು ಪರಮಾತ್ಮನಲ್ಲಿ, ಶ್ರೀ ನಾಥನಲ್ಲಿ ಇರಿಸಿದ್ದ ಭಕ್ತಿ ಪಾರವಶ್ಯತೆಯು ಪ್ರ ದಿಂದ ಎಂಬುದು ನಿರ್ವಿವಾದ.

ಇಷ್ಟೇ ಅಲ್ಲದೆ ಕರ್ನಾಟಕದಲ್ಲಿನ ಆಂಡಾಳ್ ವಿಗ್ರಹಗಳು ಹಾಗೂ ದೇವಾ ಗಳು ವಾಸ್ತುಶಿಲ್ಪ ಹಾಗೂ ಪ್ರತಿಮಾವಿವರ ದೃಷ್ಟಿಕೋನದಿಂದ ಅಧ್ಯಯನ ನಡೆಸದೆ ಇರು ಒಂದು ದೊಡ್ಡ ಕೊರತೆಯಾಗಿದೆ. ಕರ್ನಾ ದಲ್ಲಿ ಅಲ್ಲ; ತಮಿಳುನಾಡಿನಲ್ಲಿಯೂ ಈ ಕಾ ನಡೆಯದೆ ಇರುವುದು ಶೋಚನೀಯ.

(ಖ್ಯಾತ ಶಾಸನತಜ್ಞ ಡಾ॥ ಬಾ. ಗೋಪಾಲ್‌ರವರ ಲೇಖನದ ಆಧಾರದಿಂದ)

---

## ತಿ. ತಿ. ದೇ. ಕ್ಯಾಸೆಟ್ ಮಾರಾ

ತಿ ತಿ ದೇ. ಗಳ ಪರವಾಗಿ ಅವರ ಧಾ ಕ್ಯಾಸೆಟ್‌ಗಳನ್ನು ತಯಾರಿಸಿ ಮಾರಾಟ ಮಾ ಹಕ್ಕುಗಳನ್ನು ಒಂದು ವರ್ಷಕ್ಕಾಗಿ ಮದರಾ ಮಾಸ್ಟರ್ ರೆಕಾರ್ಡಿಂಗ್ ಕಂಪನಿಯ (ಸಂಗೀತಾ) ನೀಡಲಾಗಿದೆಯೆಂದು ಈ ಮೂ ಸಂಬಂಧಪಟ್ಟವರಿಗೆ ತಿಳಿಸಲಾಗಿದೆ.

ಕಾರ್ಯನಿರ್ವಹಣಾಧಿಕಾರಿ ತಿ. ತಿ. ದೇ

ಯುವವಾಣಿ

# ಸಂಸಾರ ಸಾಗರ

ಸಾಗರ ಆಕಾಶದಂತೆ ಅತ್ಯಂತ ವಿಸ್ತೃತವಾದದ್ದು ಇದಕ್ಕೆ ಹೋಲಿಕೆಯಾಗುವುದು ಬೇರೊಂದಿಲ್ಲ. ಆದುದರಿಂದಲೇ "ಗಗನಂ ಗಗನಾಕಾರಂ ಸಾಗರಃ ಸಾಗರೋಪಮಃ" ಎಂಬ ಉಕ್ತಿ ಹುಟ್ಟಿದೆ. ಹೀಗಿದ್ದರೂ ಸಂಸಾರವನ್ನೇ ಸಾಗರವೆಂದು ಕಲ್ಪಿಸಿ ಇವೆರಡರ ಅಭೇದ – ತಾದ್ರೂಪ್ಯಗಳನ್ನು ಆಲಂಕಾರಿಕವಾಗಿ ಪ್ರಯೋಗಿಸುವ ವಾಡಿಕೆ ಇದೆ.

ಹುಟ್ಟಿದ ಪ್ರತಿಯೊಬ್ಬ ವ್ಯಕ್ತಿಯೂ, ಹುಟ್ಟಿದಂದಿನಿಂದಲೇ ಈ ಸಂಸಾರಸಾಗರದಲ್ಲಿ ಈಜಾಡಲು ಆರಂಭಿಸುತ್ತಾನೆ. ಇದರ ನಂಟು ಅಂದಿನಿಂದಲೇ ಆರಂಭವಾಗುತ್ತದೆ. ಸಾಗರವೆಂಬುದು ಎಷ್ಟೋ ನದಿಗಳು ಮತ್ತೆ ಮತ್ತೆ ಬಂದು ಸೇರುತ್ತಿದ್ದರೂ, ಇನ್ನು ಬೇಡ ಎನ್ನುವಂತಿಲ್ಲ. ತಿಮಿಂಗಿಲ. ಮೊಸಳೆ ಇತ್ಯಾದಿ ಹಿಂಸ್ರ ಜಂತುಗಳಿಗೆ ಸತತಾಶ್ರಯ ಈ ಸಾಗರ.

ದಡದಲ್ಲಿ ನಿಂತು ಇದರ ವಿಸ್ತಾರಕ್ಕೆ, ಭೋರ್ಗರೆಯುವ ಪರ್ವತಾಕಾರವಾದ ಅಲೆಗಳಿಗೆ, ಅಗಾಧತೆಗೆ ಅಂಜಿದವನು ನೀರಿಗೆ ಇಳಿಯಲೇ ಆರ. ಇಳಿದರೂ ಆತ ನೀರು ಪಾಲೇ. ಇಷ್ಟಾದರೂ ಪ್ರಾಣದ ಆಸೆಯನ್ನು ಬದಿಗೊತ್ತಿ ಆಳಕ್ಕೆ ಇಳಿದು ಅಮೂಲ್ಯವಾದ ಮುತ್ತುಗಳನ್ನು ಹೊತ್ತು ತರುವ ಧೀರರು, ಶೂರರು, ಈ ಜಗತ್ತಿನಲ್ಲಿದ್ದಾರೆ. ಸೂರ್ಯನ ಪ್ರಖರ ಕಿರಣಗಳಿಂದ ಆವಿಯಾಗಿ ಆಗಸದತ್ತ ಹರಿದು ಕಾರ್ಮೋಡಗಳಾಗಿ ಮಳೆಯಾಗಿ ಹೊಯ್ಯುವುದೂ ಈ ಸಾಗರದ ಜಲವೇ. ಮೊದಲಲ್ಲಿ ಉಪ್ಪಾದದ್ದು ಮಳೆಯ ನೀರಿನ ರೂಪವನ್ನು ತಾಳಿದಾಗ ಇದು ಸಿಹಿ.

ಈ ಎಲ್ಲ ಗುಣಗಳನ್ನೂ ವಿಶೇಷಣಗಳನ್ನೂ ನಾವು ಸಾಗರದಲ್ಲಿ ಕಾಣುವಂತೆ ಸಂಸಾರದಲ್ಲಿಯೂ ಕಾಣಬಹುದು. ಸುಖಾಪೇಕ್ಷಿಯಾದ ಮಾನವನ ಸಂಗ್ರಹಣೆ, ಮತ್ತೆ ಮತ್ತೆ ತುಂಬುತ್ತಲೇ ಬರುತ್ತದೆ ಈ ಸಂಸಾರದಲ್ಲಿ. ಅಂಜುವವನಿಗೆ, ಅಳುಕುವವನಿಗೆ ಇಲ್ಲಿ ಸುಖವೇ ಇಲ್ಲ. ಸಾಗರದ ನೀರೇ ಸಾಗರಕ್ಕೆ ಬಂದು ಸೇರುವಂತೆ "ಪುನರಪಿ ಜನನಂ ಪುನರಪಿ ಮರಣಂ". ಇಂತಹ ಸಂಸಾರಸಾಗರದಲ್ಲಿ ಧುಮುಕಿ ದುಃಖದ ಅಲೆಗಳಿಗೆ ಕುಗ್ಗದೇ, ಹಿಂಸಿಸುವ ಜಲಚರಗಳಾದ ಕಷ್ಟಕಾರ್ಪಣ್ಯಗಳಿಗೆ ಜಗ್ಗದೇ, ಪರಮ ಪುರುಷಾರ್ಥರೂಪವಾದ ಮೋಕ್ಷವೆಂಬ ಮುಕ್ತಾಫಲವನ್ನು ಪಡೆಯುವವನು ಧೀರನಾದ ಸಾಧಕ

ಈ ಸಂಸಾರ ಸಾಗರದ ವಿಶಿಷ್ಟವಾದ ವರ್ಣನೆಯನ್ನು ಎಲ್ಲ ಆಚಾರ್ಯಪುರುಷರೂ ಸಾಧು ಸಂತರೂ, ತಮ್ಮ ರಚನೆಗಳಲ್ಲಿ ಮಾಡಿ ಎಚ್ಚರಿಸಿದ್ದಾರೆ.

ಸಂಸಾರಸಾಗರ ವಿಶಾಲಕರಾಲಕಾಲ
ನಕ್ರಗ್ರಹಗ್ರಸನನಿಗ್ರಹ ವಿಗ್ರಹಸ್ಯ ॥
ವ್ಯಗ್ರಸ್ಯ ರಾಗರಸನೋರ್ಮಿ ನಿಪೀಡಿತಸ್ಯ
ಲಕ್ಷ್ಮೀನೃಸಿಂಹ ಮಮ ದೇಹಿ
ಕರಾವರವಲಂಬಂ

ಇದು ಶ್ರೀ ಶಂಕರಭಗವತ್ಪಾದರ ರಚನೆ. ಶ್ರೀ ಲಕ್ಷ್ಮೀನೃಸಿಂಹಕರಾವಲಂಬ ಸ್ತೋತ್ರದ ಪದ್ಯವಿದು: ವಿಶಾಲವಾದ ಸಂಸಾರಸಾಗರದಲ್ಲಿ ಇಳಿದ ಮಾನವ 'ಕಾಲನಕ್ರ' ಕ್ಕೆ ತನ್ನ ದೇಹವನ್ನು ಕೊಟ್ಟಿದ್ದಾನೆ. ಆಸೆ ಆಕಾಂಕ್ಷೆಗಳೆಂಬ ಅಲೆಗಳು ಪೀಡಿಸುತ್ತಿವೆ. ಕಂಗೆಟ್ಟಿದ್ದಾನೆ.

ಶ್ರೀವೈಷ್ಣವ ಆಳ್ವಾರ ಪರಂಪರೆಯಲ್ಲಿ ಮಹತ್ತಾದ ಸ್ಥಾನವನ್ನು ಹೊಂದಿದ ಕುಲಶೇಖರರೂ, ತಾವು ರಚಿಸಿದ ಭಕ್ತಿರಸದಿಂದ ಪೂರ್ಣವಾದ "ಮುಕುಂದಮಾಲಾ" ಎಂಬ ಸ್ತೋತ್ರದಲ್ಲಿ ಮೂರು ಶ್ಲೋಕಗಳಿಂದ ಈ ಸಂಸಾರ ಸಾಗರವನ್ನು ವರ್ಣಿಸಿದ್ದಾರೆ. ಅಂತೆಯೇ ಇದರಿಂದ ಪಾರಾಗುವದಾರಿಯನ್ನು ತೋರಿದ್ದಾರೆ.

ವಿದ್ವಾನ್ ಬಿ. ಬಾಲಗಣಪತಿ ಭಟ್ಟ

ಭವಜಲಧಿಗತಾನಾಂ
ದ್ವಂದ್ವವಾತಾಹತಾನಾಂ ।
ಸುತದುಹಿತೃಕಲತ್ರ
ತ್ರಾಣಭಾರಾರ್ದಿತಾನಾಮ್ ।
ವಿಷಮ ವಿಷಯ ತೋಯೇ
ಮಜ್ಜತಾ ಮಪ್ಲವಾನಾಂ
ಭವತು ಶರಣಮೇಕೋ ವಿಷ್ಣುಪೋತೋ
ನರಾಣಾಮ್

'ಸಂಸಾರ'ವೆಂಬುದು ಒಂದು ಸಾಗರ. ಸುಖ–ದುಃಖ, ಕಷ್ಟ–ಕಾರ್ಪಣ್ಯ, ಜನನ–ಮರಣ, ಈ ದ್ವಂದ್ವವೇ ಬಿರುಗಾಳಿ, ತಲೆಯ ಮೇಲೆ ಹೆಂಡಿರು ಮಕ್ಕಳ ಹೊರೆ, ವಿಷಯ ವಾಸನೆಯೇ ವಿಷಮ ಜಲ. ಇಂತಹ ದುರ್ಭರವಾದ ಸಂಸಾರ ಸಾಗರಕ್ಕೆ ಧುಮುಕಿದ ನರನಿಗೆ ವಿಷ್ಣುವೆಂಬ ನೌಕೆಯು ನೆರವಾಗಿ ಸಿಗಲಿ".

ತೃಷ್ಣಾತೋಯೇ ಮದನ ಪವನೋ
ದ್ಧೂತ ಮೋಹೋರ್ಮಿ ಮಾಲೇ
ದಾರಾವರ್ತೇ ತನಯಸಹಜಗ್ರಾಹ
ಸಂಘಾಕುಲೇಚ ।
ಸಂಸಾರಾಖ್ಯೇ ಮಹತಿ ಜಲಧೌ
ಮಜ್ಜತಾಂ ನಸ್ತ್ರಿಧಾಮನ್
ಪಾದಾಂಭೋಜೇ ವರದ ಭವತೋ
ಭಕ್ತಿಭಾವಂ ಪ್ರದೇಹಿ

ತೃಷ್ಣೆ ಎಂಬ ಜಲ, ಹೆಂಡಿರೆಂಬ ಸುಳಿ, ಮಕ್ಕಳು ಸಹೋದರರೆಂಬ ಮೊಸಳೆ, ಮನ್ಮಥನೆಂಬ ಬಿರುಗಾಳಿಯಿಂದ ಮೇಲೇಳುತ್ತಿರುವ ಭೀಕರವಾದ ಅಲೆಗಳು. ಇಂತಹ ಪರಿಸರದ ಸಂಸಾರಸಾಗರದಲ್ಲಿ ಮುಳುಗಿ ನರಳುತ್ತಿರುವವನಿಗೆ, ನಿನ್ನ ಪಾದಕಮಲದ ಭಕ್ತಿಯನ್ನು ಕರುಣಿಸು, ಎನ್ನುತ್ತಾರೆ ಕುಲಶೇಖರರು. ಪಾದಕಮಲದ ಈ ಭಕ್ತಿಯೊಂದೇ ಭವಸಾಗರ ತಾರಕ.

ಆಳ್ವಾರರ ಇನ್ನೊಂದು ಪದ್ಯ ಹೀಗಿದೆ. ಇದರಲ್ಲಿ ಸಾಗರಕ್ಕೆ ಸಿಲುಕಿದವನಿಗೆ ಧೈರ್ಯ ತುಂಬಿದ್ದಾರೆ.

# ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸ ಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ-517507
ಚಿತ್ತೂರು ಜಿಲ್ಲೆ, ಆಂ. ಪ್ರ.

ಭವಜಲಧಿಮಗಾಧಂ
ದುಸ್ತರಂ ನಿಸ್ತರೇಯಂ
ಕಥಮಿತಿ ಚೇತೋ
ಮಾಸ್ಮಗಾಃ ಕಾತರತ್ವಮ್ ।
ಸರಸಿಜದೃಶಿ ದೇವೇ ತಾವಕೀ ಭಕ್ತಿರೇಕಾ
ನರಕಭಿದಿ ನಿಷಣ್ಣಾ
ತಾರಯಿಷ್ಯತ್ಯವಶ್ಯಂ ॥

ಎಲೈ ಮನಸ್ಸೇ: "ಅಗಾಧವೂ, ದಾಟಲಶಕ್ಯವೂ ಆದ ಈ ಸಂಸಾರ-ಸಾಗರವನ್ನು ಹೇಗೆ ದಾಟಲಿ? – ಎಂದು ಕಾತರಗೊಳ್ಳಬೇಡ. ಭಗವಂತನಲ್ಲಿ ನೆಟ್ಟ ಅತಿಶಯವಾದ ಭಕ್ತಿಯೊಂದೇ ನಿನ್ನನ್ನು ಪಾರುಮಾಡೀತು.

ಅದ್ವೈತಾಚಾರ್ಯರೂ, ಶ್ರೀ ವೈಷ್ಣವ ಆಳ್ವಾರರೂ, ಇವರುಗಳಿಂದ ಹೀಗೆ ವರ್ಣಿಸಿದ ಸಂಸಾರಸಾಗರ, ದ್ವೈತ ಪರಂಪರೆಯ ಆಚಾರ್ಯರ ವರ್ಣನೆಗೂ ಸಿಲುಕದೇ ಇಲ್ಲ.

ಕಲಿಕಾಮಧೇನುವಾಗಿ, ಸತ್ಯಧರ್ಮರತರಾಗಿ ಇಂದಿಗೂ ಅನಂತ ಮಹಿಮೆಯನ್ನು ಅನಂತ ವಿಧದಲ್ಲಿ ತೋರುತ್ತಿರುವವರು, ಮಂತ್ರಾಲಯದ ಶ್ರೀ ರಾಘವೇಂದ್ರರು. ಇವರ ಶಿಷ್ಯಪರಂಪರೆಯಲ್ಲಿ ಪ್ರಥಮರು "ಅಪ್ಪಣಾಚಾರ್ಯ". ಇವರಿಂದ ರಚಿತವಾದ ಶ್ರೀ ರಾಘವೇಂದ್ರ ಸ್ತೋತ್ರದಲ್ಲಿಯೂ ಈ ಸಂಸಾರಸಾಗರದ ಚಿತ್ರವನ್ನು ಕಾಣಬಹುದು.

ಸಂಸಾರೇಽಕ್ಷಯಸಾಗರೇ ಪ್ರಕೃತಿತೋಽಗಾಧೇ ಸದಾ ದುಸ್ತರೇ
ಸರ್ವಾವದ್ಯಜಲಗ್ರಹೈರನುಪಮೈಃ ಕಾಮಾದಿಭಂಗಾಕುಲೇ ।
ನಾನಾವಿಭ್ರಮದುರ್ಭ್ರಮೇಽಮಿತ ಭಯಸ್ತೋಮಾದಿ ಫೇನೋತ್ಕಟೇ
ದುಃಖೋತ್ಕೃಷ್ಟವಿಷೇ ಸಮುದ್ಧರ ಗುರೋ ಮಾಂ ಮಗ್ನರೂಪಂ ಸದಾ

ಸಂಸಾರವೆಂಬುದು ಅಕ್ಷಯಸಾಗರ. ಸ್ವಾಭಾವಿಕವಾಗಿಯೇ ಅಗಾಧ, ಅಂತೆಯೇ ದುಸ್ತರ. ಅಸಮಾನವಾದ ಜಲಚರಗಳು, ಕಾಮಾದಿಗಳು ಅಡ್ಡಿ ಆತಂಕಗಳು, ಭ್ರಾಂತಿಯ ಸುಳಿ, ಭಯಸ್ತೋಮದ ನೊರೆ. ಇಂತಹ ಸಾಗರದಿಂದ ಗುರುವೇ! ನನ್ನನ್ನು ಉದ್ಧರಿ ಎಂದಿದ್ದಾರೆ ಆಚಾರ್ಯರು.

ಪುರಂದರೋಪನಿಷತ್ತಿನ ಮೂಲದ್ರಷ್ಟಾರಾದ ಪುರಂದರರೂ ಈ ಹಿನ್ನೆಲೆಯಲ್ಲಿ "ಈಸಬೇಕು; ಇದ್ದು ಜೈಸಬೇಕು" ಎಂ ಘೋಷಿಸಿದ್ದಾರೆ "ಸಾಗರದೊಳಗಿ ಪ್ರಾಣಿಗಳು ಮತ್ತೊಂದೆಡೆಯಲ್ಲಿ ಇರಬಲ್ಲ ಭವ-ಸಾಗರದೊಳಗಿಪ್ಪ ಜೀವಿಗಳಿಗೆ ಅ ಗತಿಯಲ್ಲದೆ ಬೇರೆ ಮತ್ತೊಂದೆಡೆಯುಂ ಗುಹೇಶ್ವರನ ಲೀಲೆ ಜಗನ್ಮಯವಾದು ನಾನು ಬೆರಗಾದೆನು" ಎಂಬ ಅಲ್ಲ ಪ್ರಭುವಿನ ವಚನದಲ್ಲಿಯೂ ಭವಸಾಗ ಬಣ್ಣನೆಯನ್ನು ಕಾಣಬಹುದು.

ಒಟ್ಟಿನಲ್ಲಿ ಭವಸಾಗರಕ್ಕೆ ಧುಮುಕಿ ಮಾನವ ಅಂಜದೇ, ಅಳುಕದೇ ಭಗವ ಕ್ತಿಯ ನೌಕೆಯನ್ನು ಆಶ್ರಯವಾಗಿ ಪಡೆ ಇದರಿಂದ ಪಾರಾಗುವುದೇ ಆದ್ಯ ಕರ್ತವ "ಇಹ ಸಂಸಾರೇ ಖಲು ದುಸ್ತಾ ಕೃಪಯಾಽಪಾರೇ ಪಾಹಿ ಮುರಾರೇ" ಎಂ ನಾವೂ ಭಗವಂತನಿಗೆ ಶರಣಾ ರಾಗೋಣ.

(15 ನೇ ಪುಟದಿಂದ)

ಪಕ್ಷಿಗಳ ಅಗಲಿಕೆಯಂತೆ, ತನ್ನ ಚಕ್ರವರ್ತಿ ಎಂ ಬಿರುದು ಬಿಟ್ಟುಹೋಗುತ್ತಿರಲು ಭೂಮಿಗೆ ಕತ್ತ ಆವರಿಸಿದಂತೆ, ಸೂರ್ಯನ ಅಸ್ತಮಾನದ ಜೊತೆ ತನ್ನ ದೇಶಕ್ಕೆ ದುಃಖ ಉಂಟುಮಾಡಿ, ಕುರುಕು ಸೂರ್ಯನಾದ ದುರ್ಯೋಧನನು ಅಸ್ತಂಗತನಾದನ

ಇಲ್ಲಿಗೆ ರನ್ನ ಕವಿಯ ದುರ್ಯೋಧನನ ಪಾತ್ರ ಅಭಿನಯ ಮುಕ್ತಾಯವಾದಂತೆಯೇ. ಹೀ ಮೂರನೇ ಅಧ್ಯಾಯದಿಂದ ದುರ್ಯೋಧನ ಪಾತ್ರದ ಚಿತ್ರಣ ಕೈಗೊಂಡಿದ್ದರೂ, ಒಂಬತ್ತನೆ ಅಧ್ಯಾಯದವರೆಗೂ ಅದನ್ನು ಬೆಳೆಯಗೊಡಿಸಿದ ನಷ್ಟೇ ಅಲ್ಲ, ತಾನು ಆ ಪಾತ್ರಕ್ಕೆ ನೀಡಿರು ಬಿರುದಿಗೆ ಕಳಂಕ ಹಾಗೂ ಕುಂದು ಬಾರದಂ ಅದರ ಅರ್ಥ ಸ್ವಾರಸ್ಯವನ್ನು ಚೆನ್ನಾಗಿ ಕಾಪಾ ಕೊಂಡು ಬಂದಿದ್ದಾನೆ, ಕವಿ.



'ಮಾತು ಆಡಿದರೆ ಹೋಯಿತು, ಮುತ್ತು ಒಡೆದರೆ ಹೋಯಿತು' ಎಂಬ ಗಾದೆ ಜನ ಜನಿತ. ಅದೇ ರೀತಿ, ಮುತ್ತಿನಂತೆ ಅಮೂಲ್ಯವಾದ ಕಾಲವನ್ನು ಕೂಡ ಇದಕ್ಕೆ ಅನ್ವಯಿಸಬಹುದು. ಅಂದರೆ, ಒಮ್ಮೆ ಬಂದು ಹೋದ ಕಾಲ ನಮ್ಮ ಬಾಳಿನಲ್ಲಿ ಮರಳಿ ಬಾರದು. ಇಂತಹ ಕಾಲದ ಸರಿಯಾದ ಬಳಕೆ ನಮ್ಮಲ್ಲಿ ಇನ್ನೂ ಅನೇಕ ಜನರಿಗೆ ತಿಳಿದಿಲ್ಲ. ವೃಥಾ ಕಾಡುಹರಟೆಯಲ್ಲಿ, ಕೀಳು ಮನೋರಂಜನೆಗಳಲ್ಲಿ ನಮ್ಮ ಸುತ್ತಣ ಪರಿಸರ ಕಾಲ ಕಳೆಯುತ್ತಿರುವುದನ್ನು ಕಾಣುತ್ತಿದ್ದೇವೆ. ಕಾಲ ಕಳೆಯುವುದೇ ತಪ್ಪಲ್ಲ. ಆದರೆ, ಕಾಲವು ಫಲಪ್ರದವಾಗುವುದು ಉನ್ನತ ಆಲೋಚನೆಗಳಿಂದ, ಕರ್ಮನಿಷ್ಠೆಯಿಂದ ಮಾತ್ರ !

ಕಾಲವೆಂಬುದು ಮಹಾವೈದ್ಯನಿದ್ದಂತೆ !

ಕಾಲವು ದ್ರವ್ಯವೆಂಬುದನ್ನು ನೆನಪಿನಲ್ಲಿಡಬೇಕು. ಅಷ್ಟೇ ಅಲ್ಲದೆ, ಕಾಲವು ಅನಂತವಾದುದು. ಅದರ ಪ್ರವಾಹವು ಯಾರಿಗಾಗಿಯೂ ತಡೆಯುವುದಿಲ್ಲ. ಕಾಲದಲ್ಲಿ ಅಕಾಲ, ಸುವರ್ಣಸಮಯ, ಪಕ್ವ–ಅಪಕ್ವ ಕಾಲ, ಅನಿಷ್ಟಕಾಲ, ದರಿದ್ರಕಾಲ– ಹೀಗೆ ಅನೇಕ ವಿಧಗಳನ್ನು ಕೇಳಿದ್ದೇವೆ. ಆದರೆ, ಕಾಲವನ್ನು ಹೀಗೆ ವಿಭಜಿಸುರುವ ಕ್ರಮ ಎಲ್ಲಿಯೂ ಕಂಡುಬಂದಿಲ್ಲ. ಅದು ಅವರವರ ಮಾನಸಿಕ ಪರಿಸ್ಥಿತಿಗಳ ಮೇಲೆ ಅವಲಂಬಿಸಿರುತ್ತದೆ. ಸಾಮಾನ್ಯರ ಜೀವನದಲ್ಲಿ ತೊಂದರೆ ಕಂಡು ಬಂದರೆ, ತಕ್ಷಣ ಅದನ್ನು ಅವರು "ಕಾಲ ಸರಿಯಾಗಿಲ್ಲ" ಎಂದು ಕಾಲದ ಮೇಲೆ ಆರೋಪಿಸುತ್ತಾರೆ. ಆದರೆ, ಕಾಲವನ್ನು ಸರಿಯಾಗಿಸಿಕೊಳ್ಳುವುದು ಬಿಡುವುದು ನಮ್ಮ ಕೈಯಲ್ಲೇ ಇದೆ.

ಕೆಟ್ಟಕಾಲ, ಒಳ್ಳೆಕಾಲ ಎಂಬುದಿಲ್ಲ. ಋತುಮಾನಕ್ಕನುಗುಣವಾಗಿ ಪ್ರಕೃತಿ ಬದಲಾವಣೆ ಹೊಂದುತ್ತದೆ. ಕಾಲ ನಮ್ಮನ್ನು ಅನುಸರಿಸಿ ನಡೆಯುವುದಿಲ್ಲ. ನಾವು ಕಾಲವನ್ನು ಅನುಸರಿಸಿ ನಡೆಯುವುದು ಅವಶ್ಯಕ. ನಮ್ಮ ಕಾಲವು ಅನಿಷ್ಟ ಘಟನೆಗಳಿಂದ ತುಂಬಿದ್ದಾಗ ಅದು ನಮ್ಮ ಪಾಲಿಗೆ 'ಕೆಟ್ಟಕಾಲ'ವಾಗುತ್ತದೆ.

ಕಾಲ ಜೇರಾಯ್ತೆಂದು
ಗೋಳಾಡುವುದೇಕೆ?
ಲೀಲೆ ಜಗವೆನ್ನಲದು ಪರಿಸರಿ ಪರೀಕ್ಷೆ!
ತಾಳೆಲ್ಲವನು ನಿನ್ನ ಸಂಯಮದ ಸತ್ವದಿಂ
ಬಾಳುವುದೆ ಗೆಲುವೆಲವೊ–ಮರಳ
ಮುನಿಯ ॥

ಅನೇಕರು ಕಾಲವನ್ನು ದೈವಕ್ಕೆ ಹೋಲಿಸಿದ್ದಾರೆ–

"ಕಾಲಾಯ ತಸ್ಮೈ ನಮಃ"
"ಕಾಲ ಭಯವಾರಿಣೀ ಕಪಾಲಿನೀ
ಕಾಲರೂಪಿಣೀ"

–ಇಂತಹ ನುಡಿಗಳನ್ನು ಗಮನಿಸಿದಾಗ ಕಾಲದ ಔಚಿತ್ಯ ಅರಿವಾಗುತ್ತದೆ.

ಜೀವನದಲ್ಲಿ ಅನೇಕ ಸಮಸ್ಯೆಗಳು ಉದ್ಭವಿಸುವುದು ಸಹಜ. ಆದರೆ, ಅವೆಲ್ಲವನ್ನೂ ಪರಿಹರಿಸಿಕೊಳ್ಳುವುದು ಸಾಧ್ಯ. ಈ ದಿಸೆಯಲ್ಲಿ ನಾವು ಕಾಲವನ್ನು ಗಮನದಲ್ಲಿಟ್ಟುಕೊಂಡು ಬಾಳಬೇಕಾಗುತ್ತದೆ. ಕುಶಲ ಕರ್ಮಗಳಲ್ಲಿ ನಮ್ಮನ್ನು ತೊಡಗಿಸಿಕೊಂಡು ಕಾಲವನ್ನು ಸದ್ವಿನಿಯೋಗಿಸಿಕೊಂಡಾಗ ಬಾಳಿನಲ್ಲಿ ಸಾಫಲ್ಯವನ್ನು ಕಾಣಬಹುದು. 'ಬಂಗಾರದ ಕ್ಷಣವನ್ನು ಬೇಡದ ತೊಂದರೆ ಬರಡು ಮಾಡುತ್ತದೆ'.

ಪೂರ್ವಿಕರು, ಜ್ಯೋತಿಷ್ಯ ಶಾಸ್ತ್ರದ ಪ್ರಕಾರ ಅನಂತ ಕಾಲವನ್ನು ಘಳಿಗೆ, ವಿಘಳಿಗೆ, ಗಂಟೆ, ನಿಮಿಷ, ಸೆಕೆಂಡು ಇತ್ಯಾದಿಗಳಾಗಿ ಕೋಷ್ಟಕ ರೂಪದಲ್ಲಿ ರಚಿಸಿದರು. ಅವರ ಪ್ರಕಾರ – ಸಾವು ಕೂಡ ಒಂದು 'ಇತಿ–ಮಿತಿ'ಗೆ ಒಳಪಟ್ಟಿರುವುದು. ಕಾಲವು ಅನಂತವಾಗಿ ಪ್ರವಹಿಸುತ್ತದೆ. 'ಕಾಲಮಾನ'ದ ವಿಚಾರವಾಗಿ ಮನ್ವಂತರದ ಲಕ್ಷಣವನ್ನು ವಿಷ್ಣುಪುರಾಣದಲ್ಲಿ ಅವಲೋಕಿಸಬಹುದು.

'ಮತ್ತೀಕೆರೆ ಅನಂತು'

# ಕಾಲಕ್ಷೇಮ

ನಮ್ಮ ಒಂದು ತಿಂಗಳಿಗೆ–ಪಿತೃಗಳಿಗೆ ಒಂದು ಹಗಲು–ರಾತ್ರಿ ಆಗುತ್ತದೆ;

ನಮ್ಮ ಒಂದು ವರ್ಷಕ್ಕೆ–ದೇವತೆಗಳಿಗೆ ಒಂದು ಹಗಲು–ಇರುಳು ಆಗುತ್ತದೆ.

ದೇವತೆಗಳ ಹನ್ನೆರಡು ಸಾವಿರ ವರ್ಷಗಳಿಗೆ – ಒಂದು ಯುಗ,

ಇಂಥ ದೇವಯುಗ – ಎಪ್ಪತ್ತೊಂದು ಬಾರಿ ಆದರೆ ಅದಕ್ಕೆ ಮನ್ವಂತರ ಎಂಬುದಾಗಿ ಕರೆಯಲಾಗಿದೆ. ಈಗಿನ ಮನ್ವಂತರ ಇಪ್ಪತ್ತೆಂಟನೇ ವೈವಸ್ವತ ಮನ್ವಂತರ.

ಗುಪ್ತರ ಕಾಲವನ್ನು 'ಸುವರ್ಣಯುಗ'ವೆಂದು ಕರೆಯುತ್ತಾರೆ. ಕಾರಣ, ಆ ಕಾಲ ಅವರು ಬಾಳಿ ಬದುಕಿದ ರೀತಿಯನ್ನು ಎತ್ತಿ ತೋರಿಸುತ್ತದೆ. ಗುಪ್ತರು ರಾಜಕೀಯವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ, ಕಲಾತ್ಮಕವಾಗಿ ಪರಿಪೂರ್ಣವಾದ ಬದುಕನ್ನು ನಡೆಸಿದುದಲ್ಲದೆ, ಅವರ ಮುಂದಿನ ತಲೆಮಾರಿನವರೂ ಕೂಡ ತಾವು ಸಲ್ಲಿಸಿದ ಅಮೋಘ ಕಾಣಿಕೆಗಳಿಗೆ ತಲೆದೂಗುವಂತೆ ಮಾಡಿದರು.

ಒಮ್ಮೆ ಶ್ರೀ ರಾಮಕೃಷ್ಣ ಪರಮಹಂಸರ ಬಳಿಗೆ ಒಬ್ಬ ವೈದ್ಯ ಹೋಗಿ "ಏನಯ್ಯ, ನಿನ್ನ ಕಾಲವನ್ನೆಲ್ಲಾ ಈ ರೀತಿ ಹುಚ್ಚು ಹಿಡಿದವನಂತೆ ವೃಥಾ ವ್ಯರ್ಥ ಮಾಡುತ್ತಿರುವೆಯಲ್ಲಾ" ಎಂದು ಕೇಳಿದಾಗ ರಾಮಕೃಷ್ಣರು ಹೀಗೆ ಉತ್ತರಿಸಿದರು. "ಈ ಪ್ರಪಂಚದಲ್ಲಿ ಹುಚ್ಚರಾಗಿಲ್ಲದವರು ಯಾರು? ಈ ವಿಶ್ವವೇ ಒಂದು ಹುಚ್ಚರ ಆಸ್ಪತ್ರೆಯಾಗಿರುತ್ತದೆ. ಇದರಲ್ಲಿ ಕೆಲವರು ಧನಕ್ಕೋಸ್ಕರ, ಮತ್ತೆ ಕೆಲವರು ಕೀರ್ತಿಗೋಸ್ಕರ, ಕೆಲವರು ಸ್ತ್ರೀ ಮತ್ತು ವಿಷಯಭೋಗಗಳಿಗೋಸ್ಕರ–ಈ ರೀತಿ ಅನೇಕ ವಿಧವಾಗಿ ಹುಚ್ಚುತನದಿಂದ ತಮ್ಮ ಕಾಲವೆಲ್ಲವನ್ನು ವೃಥಾ ವ್ಯರ್ಥ ಮಾಡುತ್ತಿದ್ದಾರೆ. ನನಗೆ ದೇವರ ವಿಷಯವಾಗಿ ಹುಚ್ಚು

ಹಿಡಿದಿದೆ. ನಿನ್ನ ಕೈಲಾದರೆ ತಕ್ಕ ಔಷಧಿಯನ್ನು ಕೊಟ್ಟು ಗುಣಪಡಿಸಿ ಪುಣ್ಯವನ್ನು ಕಟ್ಟಿಕೊಳ್ಳಬಹುದು'' ಎಂದರು!

ಪುರಂದರದಾಸರು ಕಾಲದ ಸದ್ವಿನಿಯೋಗದ ಬಗ್ಗೆ ಹೇಳುತ್ತಾ-

ಕಾಲನ ದೂತರು ಕಾಲ್ಪಿಡಿದೆಳೆವಾಗ
ತಾಳು ತಾಳೆಂದರೆ ತಾಳುವರೆ?
ದಾಳಿ ಬಾರದ ಮುನ್ನ ಧರ್ಮವ
ಗಳಿಸಿರೋ
ಸುಳ್ಳು ಸಂಸಾರದ ಸುಳಿಗೆ
ಸಿಕ್ಕಲು ಬೇಡಿ- ಎಂದರೆ-

'ಭಜಗೋವಿಂದಂ'ನಲ್ಲಿ ಶ್ರೀ ಶಂಕರರು-

"ಸಂಪ್ರಾಪ್ತೇ ಸನ್ನಿಹಿತೇ ಕಾಲೇ
ನಹಿನಹಿ ರಕ್ಷತಿ ಡುಕೃಂಕರಣೇ ||"

ಎನ್ನುತ್ತಾರೆ.

ನಾವು ಗತಕಾಲದ ವೈಭವವನ್ನು ನೆನೆದು, ಸಮಕಾಲೀನ ದೃಷ್ಟಿಯನ್ನು ಬೆಳೆಸಿಕೊಂಡು, ಭವ್ಯ ಭವಿಷ್ಯತ್ ಕಾಲವನ್ನು ರೂಪಿಸಿಕೊಳ್ಳಬೇಕು. ಆಯಾಯ ಕಾಲಕ್ಕೆ ತಕ್ಕಂತೆ, ಅಂದರೆ- ಬಾಳ ಪ್ರಾತಃಕಾಲದಲ್ಲಿ ಕಲಿತು- ಯೌವನದಲ್ಲಿ ಅರಗಿಸಿಕೊಂಡು ವೃದ್ಧಾಪ್ಯದಲ್ಲಿ ಅನುಭವಿಸಬೇಕು. ಆಗಲೇ "ಕಾಲ'' ಬಂಗಾರಮಯವಾಗುವುದು. ಕಾಲ ಸವೆದಂತೆ ಬಾಳಿನ ಭವ್ಯತೆ ನಿರ್ಣಯವಾಗುತ್ತದೆ. ಕೆಲವೊಮ್ಮೆ ನಾವು ಇಂದು "ಏನು ದರಿದ್ರ ಕಾಲ ಬಂತಪ್ಪಾ!'' "ಮಕ್ಕಳಿಗೆ ಕುಡಿಯಲು ಹಾಲು, ನೀರಿಗೆ ಬಂತಲ್ಲ ಬರಗಾಲ'' ಎನ್ನುವ ಉದ್ಗಾರವನ್ನು ಕೇಳುತ್ತಿರುತ್ತೇವೆ. ಆ 'ಬರ' ನಾವು ತಂದುಕೊಂಡದ್ದರಿಂದ ಆದದ್ದು ಎನ್ನುವ ಅರಿವಿದ್ದರೂ ಕೂಡ ಅದರ ಪರಿಹಾರ ಕಾರ್ಯಗಳಲ್ಲಿ ತೊಡಗದೆ ಕಾಲಹರಣದ ಮಾತನಾಡುತ್ತೇವೆ

ಯಾಂತ್ರಿಕ ಯುಗದಲ್ಲಿ ವಿರಾಮದ ಅತ್ಯಮೂಲ್ಯ ವೇಳೆಯನ್ನು ಸರಿಯಾಗಿ ಅಳವಡಿಸಿಕೊಳ್ಳದೇ ಹೋದರೆ ವಿನಾಶಕ್ಕೆ ದಾರಿಯಾಗುತ್ತವೆ.

"ಮೈಗಳ್ಳತನವೊಂದು ಪಿಶಾಚಿಯ
ಕಾರ್ಖಾನೆ''

ವಿರಾಮ ವೇಳೆಯನ್ನು ಬುದ್ಧಿಯ ವಿಕಾಸಕ್ಕೆ ಬಾಳ್ಮೆಯ ಮೇಲ್ಮೆಗೆ ಬಳಸಬೇಕು. ಸತ್ಸಂಪ್ರದಾಯಗಳ ಪರಿಷ್ಕರಣದ ಬಗೆಗೆ ಚರ್ಚಿಸಿದರೆ ಅನುಷ್ಠಾನ ಯೋಗ್ಯವಾಗಿರುತ್ತದೆ.

ಹೊತ್ತು ಹೋದ ಬಳಿಕ ನಿನ್ನನಾರು
ಬಲ್ಲರು!
ಹೊತ್ತಿತ್ತು ಹೋಗದ ಮುನ್ನ, ಮೃತ್ಯು
ಹುಯ್ಯದ ಮುನ್ನ
ತೊತ್ತಿನ ಕೆಲಸವ ಮಾಡು
ಕೂಡಲ ಸಂಗಮದೇವನ

ಎನ್ನುತ್ತಾರೆ ವಚನಕಾರರು. ಕೇವಲ 'ಜಪ'ದಲ್ಲಿ ಕಳೆಯಬೆಕೆಂದಲ್ಲ. ಕ್ಲುಪ್ತ
ಕಾಲವನ್ನು ಜಪಕ್ಕೆ ಕೊಟ್ಟು – ಉ
ಕಾಲದಲ್ಲಿ ವ್ಯಾವಹಾರಿಕ ಕೆಲಸಗಳ
ಅಷ್ಟೇ ಮುತುವರ್ಜಿಯಿಂದ ಮಾಡುವ
ಒಳ್ಳೆಯದು.

ಆತ್ಮ ತತ್ತ್ವದ ವರ್ಣನೆಯು
ಪ್ರಪಂಚದ ಅಸ್ತಿಸೂಚಕ ಕಾಲವ
ತೊರೆದು–ಅನಂತತೆಯು ಕಾಲವನ್ನು
ಬಣ್ಣಿಸಿದ್ದಾರೆ–

ನಕ್ಷತ್ರ ಸೂರ್ಯೋ ಭಾತಿ ನ
ಚಂದ್ರತಾರಕಂ ನೇ
ವಿದ್ಯುತೋ ಭಾಂತಿ ಕುತೋಯಮ
ತಮೇವ ಭಾಂತಮನುಭಾತಿ ಸರ್ವಂತ
ಭಾಸಾ ಸರ್ವಮಿದಂ ವಿಭಾ

ಅಲ್ಲಿ ಸೂರ್ಯ, ಚಂದ್ರ, ಅಗ್ನಿ, ತಾರೆ
ಬೆಳಗಲಾರವು. ಆತ್ಮದ ಕಾಲವೇ ಅನ
ಕಾಲ ಅಥವಾ "ಪೂರ್ಣಕಾಲ'', ಯಾ
"ಕಾಲಜ್ಞಾನ''ದ ಬಗೆಗೆ ಹೆಚ್ಚಿಗೆ ತಿಳುವ
ಇರುವುದೋ ಅಂಥವರು ಕಾಲವನ್ನು ಗೆ
ತೃಪ್ತಿ ಪಡೆಯುವರು.

ವೈಚಾರಿಕತೆಯು ನಮ್ಮ ಬಾ
ಉಪಕರಣವಾಗಿ ಜೀವನರಥವು ವಿಶ
ಅನುಭವದೆಡೆ ಸಾಗಬೇಕು. ಇದೇ 'ಪ
ಕಾಲ'. ಈ ಪರ್ವಕಾಲವನ್ನು ಪೈಶಾ
ಕೃತ್ಯಗಳಿಗೆ ಬಳಸಿದರೆ 'ಪರ್ವ' ಹೊ
'ಗರ್ವಕಾಲ' ಆವರಿಸಿ ಘನತೆ ಕು
ವಿನಾಶದ ಹಾದಿ ಹಿಡಿಯುತ್ತದೆ. ವಿವೆ
ಗಳಾದವರು ಯಾವ ಕಾರ್ಯ ಮಾ
ಬೇಕಾದರೂ ಇದು ಎಂಥ ಕಾಲ,
ಕಾರ್ಯಕ್ಕೆ ನಿಮಿತ್ತವೇನು – ಇವೆಲ್ಲವನ
ಚೆನ್ನಾಗಿ ಯೋಚಿಸಬೇಕು. ಕಾಲವನ
'ಕಾಲಕ್ಷೇಪ (ಹರಣ) ವಾಗಿಸಿಕೊಳ್ಳ
ಕ್ಷೇಮವಾಗಿಸಿಕೊಳ್ಳಬೇಕು. ಮಹನೀ
ರೆಲ್ಲಾ ಕಾಲವನ್ನು ಸದುಪಯೋಗ
ಕೊಂಡು ದೊಡ್ಡವರಾಗಿದ್ದಾರೆ. ಶ್ರೀಮ
ನಾಗಲೂ, ಧೀಮಂತನಾಗಲೂ 'ಕಾಲ
ಸರಿಯಾದ ಬಳಕೆಯೇ ಕಾರಣವಾಗುವುದ

★

## ಪ್ರಕಟನೆ

ತಿರುಮಲೆ ತಿರುಪತಿ ದೇವಸ್ಥಾನಗಳವರು, ತಿರುಮಲೆಗೆ ಹೋಗುವ ಘಾಟ್ ರಸ್ಥೆಯಲ್ಲಿ ಕೆಟ್ಟುನಿಂತವಾಹನಗಳ ಅಗತ್ಯ ದುರಸ್ತಿಗಾಗಿ, ಸರಸವಾದ ದರಗಳಲ್ಲಿ ಕೆಲಸಮಾಡುವ ಒಂದು ಸಂಚಾರೀ ದುರಸ್ತಿ ವಾಹನವನ್ನು ಏರ್ಪಾಡು ಮಾಡಿರುತ್ತಾರೆ. ಈ ವಾಹನವು ಎಲ್ಲ ದಿನಗಳಲ್ಲೂ ಬೆಳಗ್ಗೆ 9 ಗಂಟೆಯಿಂದ ಸಂಜೆ 6 ಗಂಟೆಯವರೆಗೆ, ತಿರುಪತಿಯ ಅಲಿಪಿರಿ ಟೋಲ್ ಗೇಟಿನಲ್ಲಿಯಾಗಲೀ ಅಥವಾ ತಿರುಮಲೆಯ ಟೋಲ್‌ಗೇಟಿನಲ್ಲಿಯಾಗಲೀ ದೊರೆಯುವಂತೆ ಏರ್ಪಾಡು ಮಾಡಲಾಗಿದೆ. ಹಾಗಾಗಿ ತಮ್ಮ ವಾಹನಗಳನ್ನು ದುರಸ್ತಿ ಮಾಡಿಸಿಕೊಳ್ಳ ಬಯಸುವವರು ಮೇಲ್ಕಂಡ ಟೋಲ್‌ಗೇಟ್‌ಗಳಲ್ಲಿನ ಸಿಬ್ಬಂದಿಯನ್ನು ವಿಚಾರಿಸಿ ಈ ಸೇವಾಸದುಪಾಯದ ಅನುಕೂಲ ಪಡೆಯಬಹುದು.

—ತಿ. ತಿ. ದೇ.

## ಕಿಶೋರಜಗತ್

# ಗಜೇಂದ್ರ ಮೋಕ್ಷ

ಪರಮಾತ್ಮನ ದಯೆಗೆ ಮಿತಿಯೇ ಇಲ್ಲ. ಅವನು ದಯಾಸಿಂಧುವಾಗಿರುವಂತೆ ಕಾರುಣ್ಯ ಮೂರ್ತಿಯೂ ಆಗಿದ್ದಾನೆ. ಮಾನವರನ್ನೇ ಅಲ್ಲದೆ ಪಶು ಪಕ್ಷಿಗಳನ್ನೂ, ಅಣುರೇಣು ತೃಣ ಕಾಷ್ಠಗಳನ್ನೂ ಅವನು ಪ್ರೀತಿಸಿ ಆದರಿಸುತ್ತಾನೆ; ಆದುದರಿಂದ ರಾಮ, ಕೃಷ್ಣ ರೂಪದಲ್ಲಿ ಮಾನವನ ಮೇಲಿರುವ ತನ್ನ ಪ್ರೇಮವನ್ನು ಅಭಿವ್ಯಕ್ತಿಗೊಳಿಸಿರುವುದೇ ಅಲ್ಲದೆ ಮತ್ಸ್ಯ, ಕೂರ್ಮ, ವರಾಹಗಳ ಅವತಾರ ಮಾಡಿ ಪ್ರಾಣಿವರ್ಗದ ಮೇಲಿನ ಪ್ರೀತಿಯನ್ನೂ ಹೊರಗೆಡವಿದ್ದಾನೆ. ಇದಕ್ಕೆ ಗಜೇಂದ್ರ ಮೋಕ್ಷನೇ ಅನುಪಮ ಉದಾಹರಣೆ.

ಹಿಂದೊಮ್ಮೆ ಪಾಂಡ್ಯ ನಾಡಿನಲ್ಲಿ ಇಂದ್ರದ್ಯುಮ್ನನೆಂಬ ಒಬ್ಬ ರಾಜನಿದ್ದನು. ಶಕ್ತಿಶಾಲಿ ದೊರೆಯಾದ ಇವನು ತನ್ನ ಪ್ರಜೆಗಳನ್ನು ತುಂಬಾ ಪ್ರೀತ್ಯಾದರಗಳಿಂದ ನೋಡುತ್ತಿದ್ದನು. ಇವನು ಒಳ್ಳೆಯ ವಿಷ್ಣು ಭಕ್ತನಾಗಿದ್ದನು. ತನ್ನ ಹೆಚ್ಚಿನ ಕಾಲವನ್ನು ಅವನು ವಿಷ್ಣುವಿನ ಪೂಜೆಯಲ್ಲೇ ಯುತ್ತಿದ್ದನು

ಒಮ್ಮೆ ಇವನು ಮಲಯ ಪರ್ವತದ ತನ್ನ ಆಶ್ರಮದಲ್ಲಿ ದೇವರ ಧ್ಯಾನದಲ್ಲಿ ತಲ್ಲೀನನಾಗಿದ್ದನು. ಆ ಸಮಯದಲ್ಲಿ ಅಗಸ್ತ್ಯ ಋಷಿಗಳು ತಮ್ಮ ಶಿಷ್ಯರೊಡನೆ ಇಂದ್ರದ್ಯುಮ್ನನ ಆಶ್ರಮಕ್ಕೆ ಬಂದರು. ದೊರೆಯು ದೇವರ ಧ್ಯಾನದಲ್ಲಿ ಮಗ್ನನಾಗಿದ್ದುದರಿಂದ ಅತಿಥಿ ಸತ್ಕಾರ ಮಾಡಲಾಗಲಿಲ್ಲ. ಅಗಸ್ತ್ಯರಿಗೆ ವಿಪರೀತವಾದ ಕೋಪ ಬಂದಿತು. ಆಗ ಅವರು "ಅತಿಥಿ ದೇವೋ ಭವ—ಎಂದು ಅತಿಥಿಗಳನ್ನು ದೇವರಂತೆ ಗೌರವಿಸಬೇಕಾದ ನೀನು ಹಾಗೆ ಮಾಡದೆ ದೇವರೇ ಹೆಚ್ಚೆಂದು ತಿಳಿದು ಅತಿಥಿಯನ್ನು ಅಲಕ್ಷಿಸಿದ್ದೀಯೆ, ನಿನ್ನ ದೇವಭಕ್ತಿಯು ಸಾತ್ತ್ವಿಕವಾದುದಲ್ಲ, ತಾಮಸವಾದುದು. ಆದರಿಂದ ನೀನು ಮುಂದಿನ ಜನ್ಮದಲ್ಲಿ ಆನೆಯಾಗು" ಎಂದು ಶಾಪವಿತ್ತು ತಮ್ಮ ಶಿಷ್ಯರೊಡನೆ ಹೊರಟು ಹೋದರು.

ಇಂದ್ರದ್ಯುಮ್ನನು ತಾನು ಅರಿಯದೆ ಮಾಡಿದ ತಪ್ಪನ್ನು ತಿಳಿದನು. ಆಗ ಅವನು "ನಾನು ಆನೆಯಾಗಿಯೇ ಹುಟ್ಟಬೇಕಾಗಿದ್ದರೆ ಹಾಗೇ ಆಗಲಿ, ಆದರೆ ನಾನು ನಿನ್ನ ಪೂಜೆಯಲ್ಲೇ ಮಗ್ನನಾಗಿರುವಂತೆ ಕರುಣಿಸು" ಎಂದು ದೇವರನ್ನು ಪ್ರಾರ್ಥಿಸಿದನು.

ಕಾಲ ಉರುಳಿತು. ತ್ರಿಕೂಟ ಪರ್ವತದಲ್ಲಿ ರಾಜನು ಆನೆಯಾಗಿ ಪುನರ್ಜನ್ಮವೆತ್ತಿದನು. ಅವನು ಹಿಂದಿನ ಜನ್ಮದ ತನ್ನ ರಾಜನ ಗುಣಗಳನ್ನೆಲ್ಲಾ ಹೊಂದಿದ್ದನು ಆದುದರಿಂದ ಆ ಕಾಡಿನ ಆನೆಗಳಿಗೆಲ್ಲಾ ರಾಜನಾಗಿದ್ದನು. ಗಜರಾಜನು ಧೈರ್ಯ, ಸ್ಥೈರ್ಯ ಕರುಣೆ ಇತ್ಯಾದಿ ಸದ್ಗುಣಗಳನ್ನು ಹೊಂದಿದ್ದರಿಂದ ಎಲ್ಲಾ ಆನೆಗಳೂ ಈ ಗಜರಾಜನಿಗೆ ವಿಧೇಯವಾಗಿದ್ದವು. ಕಾಡಿನಲ್ಲಿ ಅಲೆಯುವ ನರಿ, ಕರಡಿ ಇತ್ಯಾದಿ ಇತರೆ ಪ್ರಾಣಿಗಳು ಕಾಣದಂತೆ ಹೊರಟು ಹೋಗುತ್ತಿದ್ದುವು.

ಒಮ್ಮೆ ಬೇಸಿಗೆಯಲ್ಲಿ ಬಿಸಿಲು ಬಹಳ ತೀವ್ರವಾಗಿತ್ತು. ಅಲ್ಲೇ ಹತ್ತಿರದಲ್ಲಿದ್ದ ಒಂದು ಸರೋವರಕ್ಕೆ ತಾವುಗಳು ಹೋಗೋಣವೆಂದು ಗಜರಾಜನು ಇತರೆ ಆನೆಗಳಿಗೆ ಹೇಳಿತು. ಎಲ್ಲವೂ ಒಪ್ಪಿ ಹೊರಟವು. ಸರೋವರವು ತಾವರೆ ಪುಷ್ಪಗಳಿಂದ ಕೂಡಿ ಬಹಳ ರಮ್ಯವಾಗಿತ್ತು. ನೀರು ಬಹಳ ಸ್ವಚ್ಛವಾಗಿತ್ತು. ಸರೋವರದ ಸುತ್ತಲೂ ಇದ್ದ ಕಾಡಿನ ಮರಗಳು ಸುವಾಸನೆಯಿಂದ ಕೂಡಿದ ಹೂವುಗಳಿಂದಲೂ, ರಸಭರಿತವಾದ ಫಲಗಳಿಂದಲೂ ತುಂಬಿ ತುಳುಕಾಡುತ್ತಿದ್ದವು, ಸರೋವರದಲ್ಲಿ ವಿಧವಿಧವಾದ ತಾವರೆ ಹೂವುಗಳು ಅರಳಿ ಸುವಾಸನೆಯನ್ನು ನಾಲ್ಕೂ ದಿಕ್ಕುಗಳಿಗೆ ಪಸರಿಸಿದ್ದವು



ಇಂತಹ ಸರೋವರವನ್ನು ಗಜರಾಜನು ಹೊಕ್ಕಿತು. ತನಗೆ ಮನಸ್ಸು ತೃಪ್ತಿಯಾಗುವಷ್ಟು ನೀರನ್ನು ಕುಡಿದು ತನ್ನ ಬೃಹತ್ ದೇಹವನ್ನು ತಂಪು ಮಾಡಿಕೊಂಡಿತು. ಉಳಿದ ಆನೆಗಳೂ ತಮ್ಮ ಯಜಮಾನನನ್ನೇ ಅನುಸರಿಸಿದವು. ಗಜರಾಜನು ತನ್ನ ಸೊಂಡಿಲಿನಿಂದ ನೀರನ್ನು ಎರಚುತ್ತ ಉಳಿದ ಆನೆಗಳೊಂದಿಗೆ ಆಟವಾಡಿತು. ಹೀಗೆ ಅವುಗಳು ಉಲ್ಲಾಸದಿಂದ ಕ್ರೀಡಿಸುತ್ತಿದ್ದಾಗ ಇದ್ದಕ್ಕಿದ್ದಂತೆ ಗಜರಾಜನ ಒಂದು ಕಾಲು ಸಿಕ್ಕಿಕೊಂಡಂತೆ ಭಾಸವಾಯಿತು. ಗಜರಾಜನ ಯಾವುದೋ ಮೀನು ಆಹಾರಕ್ಕಾಗಿ ಹುಡುಕಾಡುತ್ತಿರಬಹುದು ಎಂದುಕೊಂಡು ಕಾಲನ್ನು ಜಾಡಿಸಲು ಪ್ರಯತ್ನಿಸಿತು. ಆಶ್ಚರ್ಯ! ತನ್ನ ಕಾಲನ್ನು ಅಲುಗಾಡಿಸಲಾಗಲಿಲ್ಲ. ಯಾವುದೋ ಒಂದು ಬಿಲದಲ್ಲಿ ಸಿಕ್ಕಿ ಹಾಕಿಕೊಂಡಿರುವಂತೆ ಅದಕ್ಕೆ ಭಾಸವಾಯಿತು. ಗಜರಾಜನು ಕಾಲನ್ನು ಎಳೆಯಲು ಎಷ್ಟೇ ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ. ಹಿಡಿದಿರುವ ಹಿಗಿಯು ಹೆಚ್ಚಾಗಿತ್ತು. ನಂತರ ಪರೀಕ್ಷಿಸಿ ನೋಡಲು ಗಜರಾಜನ ಕಾಲನ್ನು ಹಿಡಿದಿದ್ದು ಒಂದು ಮೊಸಳೆ ಆಗಿತ್ತು.

ಗಜರಾಜನಿಗೆ ಸಂದರ್ಭದ ಅರಿವಾಯಿತು. ತನ್ನ ಎಲ್ಲ ಬಲವನ್ನೂ ಉಪಯೋಗಿಸಿ ಅದು ಕಾಲನ್ನು ಬಿಡಿಸಿಕೊಳ್ಳಲು ಪ್ರಯತ್ನಿಸಿತು. ಅದರ ಪ್ರಯತ್ನವೆಲ್ಲಾ ನಿಷ್ಫಲವಾಯಿತು. ಗಜರಾಜನ ಮನಸ್ಸಿಗೆ ವ್ಯಾಕುಲವಾಯಿತು. ಭೂಮಿಯ ಮೇಲೆ ತನಗೆ ಯಾರೂ ಸಮಬಲರಿಲ್ಲ ಎಂದುಕೊಂಡಿತ್ತು, ಆದರೆ ನೀರಿನಲ್ಲಿ ತಾನು ಅಸಹಾಯಕ! ಅಲ್ಲಿ ಮೊಸಳೆಯು ತನಗಿಂತ ಬಲಶಾಲಿಯಲ್ಲವೆ?

ಮೊಸಳೆಗೂ ಕೂಡ ಗಜರಾಜನ ತರಹದ್ದೆ ಒಂದು ಇತಿಹಾಸವಿದೆ. ಅದು ಹಿಂದೆ ಓರ್ವ ಗಂಧರ್ವನಾಗಿತ್ತು. ಆ ಗಂಧರ್ವನ ಹೆಸರು ಹೂ-ಹೂ ಅವನು ಬಹಳ ಸುಂದರನಾಗಿದ್ದನು. ಅವನಿಗೆ ಅತಿಯಾದ ಗರ್ವ ಮತ್ತು ಜಂಬವಿತ್ತು. ತನ್ನ ಜಂಬದಿಂದ ಅವನು ದೇವಲನೆಂಬ ಋಷಿಯೊಡನೆ ಅಗೌರವವಾಗಿ ವರ್ತಿಸಿದ್ದನು. ಆಗ ಋಷಿಯು ಅವನನ್ನು ಒಬ್ಬ ವಿಕಾರರೂಪದ ಮೊಸಳೆಯಾಗಿ ಹುಟ್ಟುವಂತೆ ಶಾಪವಿತ್ತಿದ್ದನು. ಆದ್ದರಿಂದ ಗಜರಾಜನ ಕಾಲನ್ನು ಹಿಡಿದಿದ್ದ ಮೊಸಳೆಗೂ ಕೂಡ ಅದ್ಭುತವಾದ ಶಕ್ತಿ ಇದ್ದಿತು. ಈ ರೀತಿಯಲ್ಲಿ ಗಜರಾಜ ಮತ್ತು ಮೊಸಳೆಯ ನಡುವೆ ಎಳೆತ ನಡೆಯುತ್ತಿತ್ತು.

ಉಳಿದ ಆನೆಗಳು ಇದನ್ನು ನೋಡುತ್ತಿದ್ದವು. ತಮ್ಮ ಯಜಮಾನನ್ನು ನೀರಿನಿಂದ ಎಳೆಯಲು ಬೇಗ ಹೊರಟವು. ಆಶ್ಚರ್ಯದ ಸಂಗತಿ ಎಂದರೆ ಎಲ್ಲಾ ಆನೆಗಳೂ ಕೂಡಿ ಎಳೆದರೂ ಅವುಗಳ ಪ್ರಯತ್ನ ನಿಷ್ಫಲವಾಯಿತು. ಮೊಸಳೆಯೇ ಆ ಸರೋವರಕ್ಕೆಲ್ಲಾ ಯಜಮಾನನಂತೆ ಕಾಣಿಸುತ್ತಿತ್ತು.

ಶ್ರೀಮತಿ ಬಿ.ಎಸ್. ವಿಜಯಮ್ಮ

ನೊಸಳೆ ಮತ್ತು ಗಜರಾಜನ ನಡುವಿನ ಈ ಜಗ್ಗಾಟವು ಬಹಳ ಹೊತ್ತು ಮುಂದುವರಿಯಿತು. ಗಜರಾಜನಿಗೆ ತುಂಬಾ ಆಯಾಸವಾಗಿತ್ತು. ಆಗ ತನ್ನ ದೈಹಿಕ ಶಕ್ತಿಯ ಬಗೆಗೆ ಇದ್ದ ದುರಭಿಮಾನದ ಅರಿವಾಯಿತು. ಇಂತಹ ಪರಿಸ್ಥಿತಿಯಲ್ಲಿ ನೆಂಟರು ಸ್ನೇಹಿತರುಗಳು ಯಾರೂ ಸಹಾಯಕ್ಕೆ ಬರುವುದಿಲ್ಲವೆಂದು ತಿಳಿದುಕೊಂಡಿತು. ಆಗ ತಕ್ಷಣವೇ ಹಿಂದಿನ ಜನ್ಮದಲ್ಲಿ ತಾನು ಪಾಂಡ್ಯರಾಜನಾಗಿದ್ದುದು ನೆನೆಪಿಗೆ ಬಂದಿತು. ತಾನು ಶ್ರೀ ಮಹಾವಿಷ್ಣುವಿನ ಧ್ಯಾನದಲ್ಲಿ ಅತ್ಯಂತ ಹರ್ಷದಿಂದ ಇದ್ದುದು, ಬಲ, ಸುಖ, ಸಂತೋಷಗಳು ಶ್ರೀಮಹಾವಿಷ್ಣುವಿನಿಂದ ವಿನಃ ಮತ್ತ್ಯಾರಿಂದಲೂ ಬರುವುದಿಲ್ಲವೆಂದು ತಿಳಿಯಿತು.

ತಕ್ಷಣವೇ ಅದು ಆ ಸರ್ವೇಶ್ವರನ ಗುಣಗಾನ ಮಾಡಲು ಪ್ರಾರಂಭಿಸಿತು. ಈ ಪ್ರಾರ್ಥನೆಯು ಶ್ರೀಮದ್ಭಾಗವತದ ಅತ್ಯಮೂಲ್ಯ ಭಾಗವಾಗಿದೆ.

"ಹೇ ದೇವ ನೀನು ಆದಿಮೂಲನು. ಎಲ್ಲರಿಗೂ ಆಶ್ರಯದಾತನಾಗಿರುವೆ. ನಾನು ನಿನ್ನಲ್ಲಿ ಶರಣಾಗಿದ್ದೇನೆ ಈ ದೇಹದ ಬಗ್ಗೆ ನನಗೆ ಗೌರವವಿಲ್ಲ. ಎಲ್ಲ ಶಕ್ತಿಗಳ ಹಿಂದೆಯೂ ನೀನೆ ಇರುವೆ, ನಿನ್ನನ್ನು ಪೂರ್ಣವಾಗಿ ಅರಿಯುವುದು ಯಾರಿಂದಲೂ ಸಾಧ್ಯವಿಲ್ಲ ಜನನ ಮರಣಗಳಿಗೆ ನೀನೆ ಸನಿಹದವನು. ಅಂತರ್ಯಾಮಿಯಾದ ನೀನೇ ನಮ್ಮ ಬುದ್ಧಿ ಶಕ್ತಿಗಳನ್ನು ನಿರ್ದೇಶಿಸುತ್ತಿದ್ದೀಯೆ. ನನ್ನ ಮೇಲೆ ದಯೆತೋರು! ನನ್ನೆಲ್ಲ ಅಪರಾಧಗಳನ್ನು ಮನ್ನಿಸು. ಈ ಗಜರಾಜನ ದೇಹದಿಂದಲೇ ವಿಮುಕ್ತಿ ಬೇಕೆಂದು ಕೇಳಿಕೊಳ್ಳುತ್ತಿಲ್ಲ. ನನ್ನೆಲ್ಲದನ್ನೂ ನಿನಗೆ ಅರ್ಪಿಸುತ್ತಿದ್ದೇನೆ. ನನ್ನ ಮೇಲೆ ಕರುಣೆ ತೋರು!"

ಈ ರೀತಿಯಲ್ಲಿ ಪ್ರಾರ್ಥನೆಮಾಡುತ್ತ ತನ್ನನ್ನೇ ಪರಮಾತ್ಮನಿಗೆ ಅದು ಅರ್ಪಿಸಿಕೊಂಡಿತು. ಆದರೆ ಇದರಿಂದ ಅದಕ್ಕೆ ಒಂದು ತೊಂದರೆ ಉಂಟಾಯಿತು. ಗಜರಾಜನು ಯಾರನ್ನು ಸಂಬೋಧಿಸಿದನೆಂಬುದನ್ನು ದೇವರುಗಳು ತೀರ್ಮಾನಿಸದೆ ಹೋದರು. ಅವರುಗಳು ಗಜರಾಜನ ಹೊಗಳಿಕೆಗೆ ತಾವು ಅರ್ಹರಲ್ಲ ಅವನ ಪ್ರಾರ್ಥನೆ ಎಲ್ಲಾ ಕಾರಣಗಳಿಗೂ ಕಾರಣವಾಗಿದೆ. ಅದ್ದರಿಂದ ಖಂಡಿತ ತಾವುಗಳು ಆ ಹೊಗಳಿಗೆ ಅಲ್ಲ ಎಂದೂ ತಮ್ಮಗಳಿಗೆ ಕೆಲವು ಎಲ್ಲೆಗಳಿವೆ ಎಂದುಕೊಂಡರು. ಈ ರೀತಿಯಾಗಿ ಯೋಚಿಸುತ್ತಾ ಆ ದೇವರುಗಳು ಗಜರಾಜನ ಮೊರೆಗೆ ಏನೂ ಪ್ರತ್ಯುತ್ತರ ಕೊಡಲಾರದಾದರು.

ಈ ಲೋಕಗಳ ಸಮಸ್ತ ವಸ್ತುಗಳ ಸೃಷ್ಟಿಕರ್ತನೂ ಮತ್ತು ಕೊನೆಯಲ್ಲಿ ಎಲ್ಲವನ್ನೂ ತನ್ನಲ್ಲಿಯೇ ಅಡಗಿಸಿ ಕೊಳ್ಳಬಲ್ಲವನೂ ಆದ ಶ್ರೀ ಮಹಾವಿಷ್ಣುವು ಗಜರಾಜನ ಪ್ರಾರ್ಥನೆಗೆ ನಗುತ್ತ ಸರೋವರದಿಂ ಮೇಲೆದ್ದು ಬಂದನು. ಅವನು ಅಲ್ಲಿಯ ಪರಿಸ್ಥಿತಿಯನ್ನು ಅರಿತನು. ಸ್ವಾಮಿಯ ದಿವ್ಯಾಲಂಕಾರವು;

ಪೀತಾಂಬರಂ ಕರವಿರಾಜಿತ ಶಂಖ ಚಕ್ರಂ
ಕೌಮೋದಕೀ ಸರಸಿಜಂ ಕರುಣಾ ಸಮುದ್ರಮ್
ರಾಧಾ ಸಹಾಯಮತಿ ಸುಂದರ ಮಂದಹಾಸಂ
ವಾತಾಲಯೇಶ ಮನಿಶಂ ಹೃದಿ ಭಾವಯಾಮಿ

ಎನ್ನುವಂತೆ ಗರುಡಾರೂಢನಾಗಿ ಶಂಖ ಗದಾಪಾಣಿಯಾಗಿ ತಾವರೆಪುಷ್ಪವನ್ನು ... ಪ್ರತ್ಯಕ್ಷನಾದನು. ಅವನು ಕಂಠ ಮತ್ತು ವ... ದಲ್ಲಿ ಧರಿಸಿದ್ದ ರತ್ನಾಭರಣಹಾರಗಳು ... ಪುಷ್ಪಹಾರಗಳು ಸ್ವಾಮಿಯ ಅಲಂಕಾರ... ಹೆಚ್ಚಿಸಿದ್ದುವು

ನೀಲ ಮೇಘಶ್ಯಾಮನಾದ ಶ್ರೀಮಹಾವಿಷ್ಣು... ಹಳದಿಬಣ್ಣದ ಪಟ್ಟೆಪೀತಾಂಬರವನ್ನು ಧರಿಸಿ... ಅದು ಅವನ ನೀಲವರ್ಣಕ್ಕೆ ಹೆಚ್ಚಿನ ಸೌಂ... ವನ್ನು ನೀಡಿತ್ತು.

ಗಜರಾಜನು ಹಿಂದಿನ ಜನ್ಮದ ಪೂಜಾ... ದಿಂದ ಪ್ರತ್ಯಕ್ಷನಾದ ಶ್ರೀಮಹಾವಿಷ್ಣು... ನೋಡಿ ಅಮಿತಾನಂದ ಹೊಂದಿತು. ಆ ಪೂ... ಫಲವೇ ತನ್ನ ಈ ಪ್ರಾಣಿ ಜನ್ಮದಲ್ಲೂ ಫಲಿಸಿ... ಬಹಳ ಸಂತೋಷಗೊಂಡಿತು. ಬಹಳ ಕಷ್ಟದಿ... ಸರೋವರದಲ್ಲಿದ್ದ ಒಂದು ಕಮಲದ ಪುಷ್ಪವ... ತನ್ನ ಸೊಂಡಿಲಿನಿಂದ ಕಿತ್ತು ಅತ್ಯಂತ ಪ್ರೀ... ವಾತ್ಸಲ್ಯದಿಂದ ಸ್ವಾಮಿಗೆ ಅರ್ಪಿಸಿತು.

ಯಾರಿಗೆ ಆಗಲಿ ಹೆಚ್ಚು ಆತ್ಮೀಯರ... ಕಂಡಾಗ ಹೇಗೆ ಆನಂದದಿಂದ ಮಾತು... ಹೊರಡುವುದಿಲ್ಲವೋ, ಹಾಗೆ ಗಜರಾಜ... ಆನಂದಸಾಗರದಲ್ಲಿ ಮುಳುಗಿತು. ಸ್ವಾಮಿಯ ಪ್ರಾರ್ಥಿಸಲು ಮಾತುಗಳೇ ಹೊರಡದಾಯಿತು.

ಶ್ರೀಮನ್ನಾರಾಯಣನು ಹೆಚ್ಚಿನ ಸಮಯ... ಯದೆ ತನ್ನ ಚಕ್ರವನ್ನು ನೀರಿನಲ್ಲಿದ್ದ ಮೊಸಳೆ ಮೇಲೆ ಪ್ರಯೋಗಿಸಿ ಅದನ್ನು ಹತ ಮಾಡಿದ... ಗಜರಾಜನ ಕಾಲುಗಳು ಮೊಸಳೆಯ ಬಾ... ಯಿಂದ ಬಿಡುಗಡೆಯಾದುವು. ಮೊಸಳೆಯು ತ... ಹಿಂದಿನ ಗಂಧರ್ವ ಜನ್ಮವನ್ನು ಹೊಂದಿ... ಗಂಧರ್ವ ಹೂಹೂ ಶ್ರೀ ಮನ್ನಾರಾಯಣನ... ಪ್ರಾರ್ಥಿಸಿ ಶಾಪವಿಮೋಚನೆಯನ್ನು ಹೊ... ದೇವಲೋಕಕ್ಕೆ ಮರಳಿದನು

ಗಜರಾಜನು ಅಂಧಕಾರವೆಂಬ ಮೊಸಳೆ... ಬಾಯಿಯಿಂದ ತನ್ನನ್ನು ಬಿಡಿಸ... ಶ್ರೀಮನ್ನಾರಾಯಣನನ್ನು ಪ್ರಾರ್ಥಿಸಿದ್ದಿತ್ತು. ಆ... ತನ್ನ ತಾಮಸವಾದ ಆನೆಯ ದೇಹವ... ತೊರೆಯಿತು. ತನ್ನ ಶುದ್ಧ ಸತ್ತ್ವರೂಪವನ್ನ... ಹೊಂದಿತು. ಶ್ರೀಮನ್ನಾರಾಯಣನಂತೆಯೆ... ನೋಡಲು ಕಾಣುತ್ತಿತ್ತು. ನಂತರ ವೈಕುಂಠದ... ಶ್ರೀಮಹಾವಿಷ್ಣುವಿನ ಸಹಾಯಕರಲಿ ಒಂದಾ... ವಾಸಿಸುತ್ತಿತ್ತು.

(32ನೇ ಪುಟ ನೋಡಿ

# ವಿದ್ಯೆಯ ಮಹತ್ವ

ವಿದ್ಯೆ ಎಂಬುದು ಸಾಮಾನ್ಯವಾಗಿ ಎಲ್ಲರಿಗೂ ಅವಶ್ಯಕವಾಗಿ ಬೇಕಾಗಿರುವ ಕಲೆಯಾಗಿದೆ. ಮಾನವನಾಗಿ ಜನಿಸಿರುವ ಪ್ರತಿಯೊಬ್ಬರೂ ತಮ್ಮ ಸ್ವರೂಪವನ್ನು ತಿಳಿದುಕೊಳ್ಳಲು ವಿದ್ಯೆ ಅತ್ಯವಶ್ಯಕವಾಗಿದೆ. ವಿದ್ಯೆಯಲ್ಲಿ ಲೌಕಿಕ ವಿದ್ಯೆ ಪಾರಮಾರ್ಥಿಕ ವಿದ್ಯೆ ಎಂಬ ಎರಡು ಬಗೆಗಳಿವೆ. ಲೌಕಿಕ ವಿದ್ಯೆಯು ಪ್ರಾಪಂಚಿಕ ಜೀವಿತಕ್ಕೆ ಅನುಕೂಲಕರವಾಗಿದ್ದರೆ, ಪಾರಮಾರ್ಥಿಕ ವಿದ್ಯೆಯು ಇಹಪರಗಳೆರಡರಲ್ಲೂ ಸೌಖ್ಯವನ್ನೀಯುವುದು.

ಸಂಸ್ಕೃತದ ಸುಭಾಷಿತಗಳಲ್ಲಿ ವಿದ್ಯೆಯ ಮಹತ್ವವನ್ನು ಕುರಿತು ಚೆನ್ನಾಗಿ ಬಣ್ಣಿಸಿದ್ದಾರೆ

ಮಾತಾ ಶತ್ರುಃ ಪಿತಾ ವೈರೀ ಯೇನ  
ಬಾಲೋ ನ ಪಾಠಿತಃ ।  
ನ ಶೋಭತೇ ಸಭಾ ಮಧ್ಯೇ  
ಹಂಸ ಮಧ್ಯೇ ಬಕೋ ಯಥಾ ॥

ಯಾವ ತಂದೆತಾಯಿಗಳು ತಮ್ಮ ಮಕ್ಕಳನ್ನು ವಿದ್ಯಾವಂತರನ್ನಾಗಿ ಮಾಡುವುದಿಲ್ಲವೋ ಅವರು ವೈರಿ, ಶತ್ರುಗಳಿದ್ದಂತೆ. ವಿದ್ಯೆಯಿಲ್ಲದವನು ಸಭೆಯ ಮಧ್ಯದಲ್ಲಿ ಶೋಭಿಸದೇ,ಹಂಸಗಳ ಮಧ್ಯೆ ಬಕಪಕ್ಷಿಯು ಹೇಗೆ ಅವಲಕ್ಷಣವಾಗಿ ಕಾಣುವುದೋ ಆ ರೀತಿಯಲ್ಲಿ ಕಾಣುತ್ತಾನೆ.

ಇನ್ನೊಂದು ಸುಭಾಷಿತವು ವಿದ್ಯಾದಾನದ ಮಹತ್ವವನ್ನು ಕುರಿತು ಈ ರೀತಿ ವಿವರಿಸುತ್ತದೆ.

ಅನ್ನದಾನಂ ಪರಂ ದಾನಂ  
ವಿದ್ಯಾದಾನಮತಃ ಪರಂ ।  
ಅನ್ನೇನ ಕ್ಷಣಿಕಾ ತೃಪ್ತಿಃ  
ಯಾವಜ್ಜೀವಂ ಚ ವಿದ್ಯಯಾ ॥

ಅನ್ನದಾನವು ಶ್ರೇಷ್ಠವಾದ ದಾನವಾಗಿದೆ. ವಿದ್ಯಾದಾನವು ಅದಕ್ಕಿಂತ ಶ್ರೇಷ್ಠವಾದುದು. ಅನ್ನದಿಂದ ಕ್ಷಣಿಕ ತೃಪ್ತಿ ಮಾತ್ರವೇ ಉಂಟಾದರೆ, ವಿದ್ಯೆಯು ಜೀವನಪರ್ಯಂತ ನಮ್ಮನ್ನು ಕಾಪಾಡುತ್ತವೆ. ಗುರುಮುಖೇನ ಬಂದ ವಿದ್ಯೆಯು ಶ್ರೇಷ್ಠವಾದುದು. ಶಿಷ್ಯನ ಪರಿಸ್ಥಿತಿಯನ್ನು ಅರಿತು ಅವನನ್ನು ಅಲ್ಲಿಂದ ಮೇಲೆತ್ತಲು ಗುರುವೊಬ್ಬನೇ ಶಕ್ತನಾಗಿರುವನು. ಇದಕ್ಕೆ ಏಕಲವ್ಯ ಉತ್ತಮ ಉದಾಹರಣೆಯಾಗಬಲ್ಲನು. ದ್ರೋಣರ ಪ್ರತಿಮೆಯನ್ನೇ ಅವನು ಗುರುವೆಂದು ತೀವ್ರವಾಗಿ ಭಾವಿಸಿ ಅಸ್ತ್ರವಿದ್ಯೆಯಲ್ಲಿ ನಿಪುಣನಾಗುತ್ತಾನೆ.

ಸರ್ವಜ್ಞನ ಈ ವಚನವು ವಿದ್ಯೆಯನ್ನು ಪಡೆಯುವ ದಾರಿಯನ್ನು ತೋರಿಸುತ್ತದೆ.

ಸರ್ವಜ್ಞನೆಂಬುವನು ಗರ್ವದಿಂದಾದವನೆ  
ಸರ್ವರೊಳಗೊಂದೊಂದು ನುಡಿಗಲಿತು  
ವಿದ್ಯೆಯ ಪರ್ವತವೇ ಆದ ಸರ್ವಜ್ಞ

ವಿದ್ಯಾವಂತನಿಗೆ ಅಹಂಕಾರವಿರುವುದಿಲ್ಲ. ತುಂಬಿದ ಕೊಡ ತುಳುಕದಂತೆ ಅವನು ಪರಿಪೂರ್ಣನಾಗಿರುತ್ತಾನೆ. 'ಅಲ್ಪ ವಿದ್ಯಾ ಮಹಾಗರ್ವಿ' ಎಂಬಂತೆ ಅರೆಬರೆ ವಿದ್ಯಾವಂತನಾಗಿದ್ದರೂ ನಾಲ್ಕಕ್ಷರ ಕಲಿತಿದ್ದೇನೆ ಎಂಬ ಜಂಬ ಬಂದುಬಿಡುವುದು. ಈಗಿನ ಕಾಲದಲ್ಲಿ ಇದೇ ಸ್ಥಿತಿಯನ್ನೇ ನಾವು ಎಲ್ಲೆಡೆಯಲ್ಲಿಯೂ ಕಾಣುತ್ತಿದ್ದೇವೆ. ಸ್ವಲ್ಪ ಓದು ಬರಹ ಕಲಿತಿರುವ ಮಾತ್ರಕ್ಕೆ ಅವಿದ್ಯಾವಂತನನ್ನು ಹೀಯಾಳಿಸಲು ಹೋಗುತ್ತಾರೆ.

"ವಿದ್ಯಾ ದದಾತಿ ವಿನಯಂ" ಎಂಬ ಪ್ರಸಿದ್ಧ ಮಹಾವಾಕ್ಯದಂತೆ ವಿದ್ಯೆಯು ವಿನಯವನ್ನು ನೀಡುತ್ತದೆ ಎಂದರ್ಥವಾಗಿದ್ದರೂ ಇದು ಸುಲಭವಾಗಿ ಸಿದ್ಧಿಸುವುದಿಲ್ಲ. ವಿದ್ಯೆ ಸ್ವಲ್ಪ ಸ್ವಲ್ಪವಾಗಿ ಬಂದರೆ ಗರ್ವ ಅತಿಯಾಗಿ ಬಂದುಬಿಡುತ್ತದೆ. ವಿನಯ ಮರೆತುಹೋಗುತ್ತದೆ.

ವಿದ್ಯೆಯು ಮಾನವನ ಮನಸ್ಸನ್ನು ವಿಕಾಸಗೊಳಿಸಿ, ಬುದ್ಧಿಮಟ್ಟವನ್ನು ಹೆಚ್ಚುವಂತೆ ಮಾಡುತ್ತವೆ. ಪುರಾತನ ಕಾಲದಲ್ಲಿ ವಿದ್ಯಾರ್ಥಿಗಳು ಗುರುಕುಲದಲ್ಲಿ ಗುರುವಿನ ಶುಶ್ರೂಷೆ ಮಾಡುತ್ತಾ ಕಷ್ಟಪಟ್ಟು ವಿದ್ಯಾಭ್ಯಾಸ ಮಾಡುತ್ತಿದ್ದರು. ಇವರಿಂದ ವಿದ್ಯೆಯು ಸುಖವಾಗಿ, ಸುಲಭವಾಗಿ ಸಿದ್ಧಿಸುವುದಲ್ಲವೆಂದು ತಿಳಿಯುತ್ತದೆ. ಸುಭಾಷಿತವೊಂದು ಈ ರೀತಿ ತಿಳಿಸುತ್ತದೆ.

ಸುಖಾರ್ಥೀ ಚೇತ್ ತ್ಯಜೇದ್ವಿದ್ಯಾಂ  
ವಿದ್ಯಾರ್ಥೀ ಚೇತ್ ತ್ಯಜೇತ್ ಸುಖಂ ।  
ಸುಖಾರ್ಥಿನಃ ಕುತೋ ವಿದ್ಯಾ  
ಕುತೋ ವಿದ್ಯಾರ್ಥಿನಃ ಸುಖಂ ॥

ಸುಖವನ್ನು ಬಯಸುವವರು ವಿದ್ಯೆಯನ್ನು ತ್ಯಜಿಸಬೇಕು. ವಿದ್ಯಾರ್ಥಿಗಳು ಸುಖವನ್ನು ತ್ಯಜಿಸಬೇಕು. ಸುಖಾರ್ಥಿಗಳಿಗೆ ವಿದ್ಯೆ ಎಲ್ಲಿಯದು ? ವ್ಯಕ್ತಿಯು ಸುಂದರನಾಗಿ, ಸುಶೀಲನಾಗಿ, ಮಹಾಧನವಂತನಾಗಿದ್ದರೂ ವಿದ್ಯೆ ಇಲ್ಲದೆ ಅವನು ಶೋಭಿಸುವುದಿಲ್ಲ. ವಿದ್ಯಾದೃಷ್ಟಿಗೆ ಸಮನಾದ ದೃಷ್ಟಿಯಿಲ್ಲ. ತನ್ನ ಗೃಹದಲ್ಲಿ ಮೂರ್ಖನಾಗಿದ್ದರೂ ಗೌರವಿಸಲ್ಪಡುತ್ತಾನೆ. ರಾಜನಾದವನು ತನ್ನ ರಾಜ್ಯದಲ್ಲಿ ಮಾತ್ರವೇ ಗೌರವಿಸಲ್ಪಡುತ್ತಾನೆ. ಆದರೆ ಪಂಡಿತನು ದೇಶಕಾಲಗಳ ನಿರ್ಬಂಧ ರಹಿತವಾಗಿ ಸರ್ವತ್ರ ಪೂಜಿಸಲ್ಪಡುತ್ತಾನೆ. ವಿದ್ಯೆ ಎಂಬ ಆಸ್ತಿಯನ್ನು ರಾಜನಾಗಲೀ, ಕಳ್ಳನಾಗಲೀ ಏನು ಮಾಡಲೂ ಸಾಧ್ಯವಿಲ್ಲ. ಗುರುವಿನಿಂದ, ಸಹಪಾಠಿಗಳಿಂದ, ತನ್ನ ಸ್ವಂತ ಮೇಧಾಶಕ್ತಿಯಿಂದ ಮತ್ತು ಕಾಲಕ್ರಮೇಣವಾಗಿ ವಿದ್ಯೆಯನ್ನು ಗಳಿಸಬೇಕು. ವಿದ್ಯೆಯನ್ನು ಖರ್ಚುಮಾಡಿದಷ್ಟೂ ಹೆಚ್ಚಾಗಿ ಹಿಂತಿರುಗಿ ಬರುತ್ತದೆ. ಈ ವಿದ್ಯೆಗಳಲ್ಲಿ ಅಧ್ಯಾತ್ಮ ವಿದ್ಯೆಯೇ ಶ್ರೇಷ್ಠವಾದುದು. ಶ್ರೀಕೃಷ್ಣ ಪರಮಾತ್ಮನು ತನ್ನ ವಿಭೂತಿಯಲ್ಲಿ "ಅಧ್ಯಾತ್ಮ ವಿದ್ಯಾ ವಿದ್ಯಾನಾಂ" (ಭಗವದ್ಗೀತೆ 10 ನೇ ಅಧ್ಯಾಯ 32ನೇ ಶ್ಲೋಕ) ಎಂದಿದ್ದಾನೆ.

ಕು॥ ಎಲ್. ರಾಜೇಶ್ವರಿ

ಅಂದರೆ ಭಗವಂತನು ವಿದ್ಯೆಗಳಲ್ಲಿ ಅಧ್ಯಾತ್ಮ ವಿದ್ಯೆಯಾಗಿದ್ದಾನೆ. ದತ್ತಾತ್ರೇಯ ಮಹರ್ಷಿಗಳಿಗೆ ಬೆಟ್ಟ ಗುಡ್ಡಗಳೂ ಹಳ್ಳಿಯ ಗುರುಗಳಾಗಿದ್ದವು. ನಾವೂ ಸಹ ವಿದ್ಯಾವಂತರಾಗಿ ಸರ್ವತ್ರ ಗುರುವನ್ನು ಕಾಣುವಂತೆ ಅನುಗ್ರಹಿಸಲು ಆ ಪರಮಾತ್ಮನನ್ನು ಪ್ರಾರ್ಥಿಸೋಣ. ವೇದಗಳಲ್ಲಿರುವ ಋಷಿಗಳ ಮೇಧಾಶಕ್ತಿಯನ್ನು ಅರಿಯಲು ಪ್ರಯತ್ನಿಸೋಣ. ಕ್ರಮೇಣ ಅವರ ಮಟ್ಟಕ್ಕೆ ಏರೋಣ.

ಓಂ ಶಾಂತಿಃ ಶಾಂತಿಃ ಶಾಂತಿಃ



(14ನೇ ಪುಟದಿಂದ)

ಕ್ರಮ ಆಂಧ್ರದೇಶದಲ್ಲಿದ್ದಷ್ಟು ಇಲ್ಲಿಲ್ಲದೇ ಇರಬಹುದು. ಹೀಗೆ ಅನೇಕ ಕಾರಣಗಳನ್ನು ಊಹೆ ಮಾಡಬಹುದು.

ಅವಧಾನಕಲೆ, ಆಂಧ್ರದೇಶದ ವೈದುಷ್ಯಕೂ ಪಾಂಡಿತ್ಯಕ್ಕೂ ಕೀರ್ತಿ ಕಳಶವಾಗಿದೆ, ಅವರ ವಿದ್ಯಾ ಪಕ್ಷಪಾತಕ್ಕೆ ಸಮುಜ್ವಲ ಸಾಕ್ಷಿಯಾಗಿದೆ. ಆಂಧ್ರದವರು ಅವಧಾನಕಲೆಯನ್ನು ಳಿಸಿಕೊಂಡು ಬಂದಿದ್ದಾರೆ. ಇಂದಿಗೂ ಬೆಳೆಸುತ್ತಲೇ ಇದ್ದಾರೆ.

ಅವಧಾನ ಅತ್ಯದ್ಭುತ ಕಲೆ–ಸುಪುಷ್ಟಬೌದ್ಧಿಕ ವ್ಯಾಯಾಮ. ಈ ತಟಿಲ್ಲತಾ ಸದೃಶ ಪ್ರತಿಭಾ ಪ್ರದರ್ಶನ–ವಿದ್ವದ್ದಿಗ್ಗಜಗಳ ಸಮರ, ಸಾಹಿತ್ಯ ಪ್ರಿಯರಿಗೆ ರಸದೌತಣವೆನ್ನುವುದರಲ್ಲಿ ಸಂದೇಹವಿಲ್ಲ.

ವಿದ್ಯಾನೇವ ವಿಜಾನಾತಿ ವಿದ್ವಜ್ಜನ ಪರಿಶ್ರಮಂ



(26ನೇ ಪುಟದಿಂದ)

ಗಜರಾಜನಿಗೆ ತಾನೇ ಎಲ್ಲವನ್ನೂ ತನ್ನ ದಿಂದಲೇ ಮಾಡುತ್ತಿರುವುದಾಗಿ ಹೆಮ್ಮೆ ಇತ್ತು ಬಲ ಸ್ವಾಮಿ ಸರ್ವೇಶ್ವರನಿಂದ ಬಂದಿದ್ದೆಂಬು ಅರಿಯುವವರೆಗೂ ಅದಕ್ಕೆ ಮೊಸಳೆಯಿಂದ ಬ ಕೊಳ್ಳಲು ಸಾಧ್ಯವಾಗಲಿಲ್ಲ. ತಾನು ಎ ಎಲ್ಲ ಬಲವೂ ಸ್ವಾಮಿಯಿಂದಲೇ ಬರುವುದು ಎ ತಿಳಿಯಿತು. ಕೂಡಲೇ ತನ್ನ ಎಲ್ಲಾ ಗಳಿಂದಲೂ ಬಿಡುಗಡೆ ಪಡೆಯಿತು.

ಗಜೇಂದ್ರಮೋಕ್ಷದ ನೀತಿಯೇನೆಂದರೆ ಗ ವನ್ನು ಬಿಟ್ಟು ಕೆಲಸವನ್ನು ಮಾಡಬೇಕು ಎಂಬು ನಾವುಗಳೆಲ್ಲರೂ ಆ ಲೀಲಾ ಮಾನುಷರೂಪಿ ಆ ಪರಮಾತ್ಮನ ಕೈಯ್ಯಲ್ಲಿನ ಬೊಂಬೆಗಳೆಂ ತಿಳಿಯುವುದು.

ಈ ಜಗತ್ತು ನಮಗೆ ಏನನ್ನೂ ಕೊಡುವು ನಮ್ಮಿಂದ ಏನನ್ನೂ ಕಿತ್ತುಕೊಳ್ಳಲೂ ಹೋ ವುದಿಲ್ಲ ಎನ್ನುವ ಪರಮಸತ್ಯವನ್ನು ನ ಹೃದಯಗಳಿಗೆ ಅಂತರಂಗಿಕವಾಗಿ ತಿಳಿಸುವ ನಂಬಿಕೆಯ ಸ್ರೋತವಾಗಿದೆ.

---

ವಾದ ಅನೇಕ ಸೂಕ್ತ ಮಂತ್ರಗಳನ್ನು ಕಂಡುಹಿಡಿದ ಋಷಿಗಳು ಮಧ್ಯಮ ಮುನಿಗಳೆಂದು ಪ್ರಸಿದ್ಧರಾಗಿದ್ದಾರೆ. ಋಗ್ವೇದದ ಎರಡನೇ ಮಂಡಲದಿಂದ ಏಳನೇ ಮಂಡಲದವರೆಗೆ ಬರುವ ವಸಿಷ್ಠ, ವಿಶ್ವಾಮಿತ್ರ, ವಾಮದೇವ, ಗೃತ್ಸಮದ, ಗೌತಮ, ಅತ್ರಿ, ಭಾರದ್ವಾಜ, ಪಾವಮಾನ್ಯ, ಮುಂತಾದವರೆಲ್ಲರೂ ಮಧ್ಯಮ ಮಹರ್ಷಿಗಳಾಗಿದ್ದಾರೆ.

ಹತ್ತನೇ ಮಂಡಲದಲ್ಲಿನ ಚಿಕ್ಕಪುಟ್ಟ ಸೂಕ್ತಕರ್ತಾರರು ಕ್ಷುದ್ರಸೂಕ್ತ, ಮಹಾಸೂಕ್ತ ಎಂದು ಕರೆಯಲ್ಪಟ್ಟಿದ್ದಾರೆ. ಇದು ಋಷಿಗಳ ಸೂಕ್ತಗಳ ಆಧಾರದಿಂದ ಮಾಡಿದ ಸಂಖ್ಯಾವಾರು ಗಣನೆ. ಸೂಕ್ತ ಸಂಖ್ಯೆಯನ್ನು ತಿಳಿಯಲು ಮಾತ್ರ ಈ ವಿಭಾಗವು ಉಪಯುಕ್ತವೆನಿಸಿದೆ.

ಗುಣಗಳ ಆಧಾರದಿಂದ ಮಾಡುವದಾದರೆ ಋಷಿ, ಋಷೀಕ, ಋಷಿಪುತ್ರ, ಮಹರ್ಷಿ, ಬ್ರಹ್ಮರ್ಷಿ ಎಂದು ಐದು ವಿಧ ವಿಭಾಗವನ್ನು ಮಾಡಬಹುದು.

ಚರಕ ಸೂತ್ರ ವ್ಯಾಖ್ಯಾನದಲ್ಲಿ ಹರಿಶ್ಚಂದ್ರನು—

ಮುನೀನಾಂ ಚತುರ್ವಿಧೋ ಭೇದಃ ॥
ಋಷಯಃ ಋಷೀಕಾಃ ಋಷಿಪುತ್ರಾಃ
ಮಹರ್ಷಯಶ್ಚ ॥

ಋಷಿ, ಋಷೀಕ, ಋಷಿಪುತ್ರ, ಮಹರ್ಷಿ ಎಂದು ನಾಕು ವಿಭಾಗಗಳಿವೆಯೆಂದು ಹೇಳಿದ್ದಾನೆ.

ಪುರಾಣಗಳಲ್ಲಿ ಐದು ವಿಧರಾದ ಋಷಿಗಳನ್ನೇನೋ ಉಲ್ಲೇಖ ಮಾಡಿದ್ದಾರೆ. ಆದರೆ ಆ ಐದೂ ತೆರನಾದ ಋಷಿಗಳ ಕ್ರಮಬದ್ಧವಾದ ವಿಭಾಗ, ವ್ಯಾಖ್ಯಾನ, ಲಕ್ಷಣ, ಕಾರ್ಯ, ಮುಂತಾದವು ಸ್ಪಷ್ಟವಿಲ್ಲ. ಬ್ರಹ್ಮದೇವರ ಹತ್ತು ಮಾನಸಪುತ್ರರು ಮಹರ್ಷಿಗಳೆಂದೂ ಉಳಿದ ತಪೋಧನರು 'ಋಷಿ' ಗಳೆಂದೂ ಅವರ ಮಕ್ಕಳೇ 'ಋಷಿಪುತ್ರ' ಅಥವಾ 'ಋಷೀಕ'ರೆಂದೂ ಸಾಮಾನ್ಯ ನಿರೂಪಣೆ ಕಂಡುಬರುತ್ತದೆ.

ಈ ಮಹರ್ಷಿ, ಋಷಿ, ಋಷಿಪುತ್ರರ ಹೆಸರುಗಳು ಇಂತಿವೆ.



**ಮಹರ್ಷಿಗಳು :**

ಭೃಗುರ್ಮರೀಚಿರತ್ರಿಶ್ಚ
ಹ್ಯಂಗಿರಾಃ ಪುಲಹಃ ಕ್ರತುಃ ।
ಮನುರ್ದಕ್ಷೋ ವಸಿಷ್ಠಶ್ಚ
ಪುಲಸ್ತ್ಯಶ್ಚೇತಿ ತೇದಶ ॥
ಬ್ರಹ್ಮಣೋ ಮಾನಸಾ ಹ್ಯೇತೇ
ಉದ್ಭೂತಾಃ ಸ್ವಯಮೀಶ್ವರಾಃ
ಪರತ್ವೇನರ್ಷಯೋ ಯಸ್ಮಾತ್
ಸ್ಮೃತಾಸ್ತಸ್ಮಾನ್ಮಹರ್ಷಯಃ ॥

ಭೃಗು, ಮರೀಚಿ, ಅತ್ರಿ, ಅಂಗಿರ ಪುಲಹ, ಕ್ರತು, ಮನು, ದಕ್ಷ, ವಸಿ ಪುಲಸ್ತ್ಯ- ಈ ಹತ್ತು ಜನರು, ಋಷಿಗ ಶ್ರೇಷ್ಠರು, ಬ್ರಹ್ಮದೇವನ ಮಾನಸಪುತ್ರ ಆದುದರಿಂದ ಇವರಿಗೆ "ಮಹರ್ಷಿಗ ಎಂದು ಹೆಸರು. ಈಶ್ವರ ಅಥವಾ ಪ್ರ ಪತಿ ಎಂದೂ ಇವರನ್ನು ಕರೆದಿದ್ದಾರೆ.

**ಋಷಿ :**

ಕಾವ್ಯೋಃ ಬೃಹಸ್ಪತಿಶ್ಚೈವ
ಕಶ್ಯಪಶ್ಚ್ಯವನಸ್ತಥಾ ।
ಉತಥ್ಯೋ ವಾಮದೇವಸ್ಯ
ಅಗಸ್ತ್ಯಶ್ಚೌಶಿಜಸ್ತಥಾ ॥
ಕರ್ದಮೋ ವಿಶ್ರವಾಃ
ಶಕ್ತಿರ್ವಾಲಖಿಲ್ಯಾಸ್ತಥಾರ್ವತಃ ।
ಇತ್ಯೇತೇ ಋಷಯಃ
ಪ್ರೋಕ್ತಾಸ್ತಪಸಾಚರ್ಷಿತಾಂ ಗತಾಃ

ಶುಕ್ರ, ಬೃಹಸ್ಪತಿ, ಕಶ್ಯಪ, ಚ್ಯ ಉತಥ್ಯ, ವಾಮದೇವ, ಅಗಸ್ತ್ಯ, ಉಶಿ ಕರ್ದಮ, ವಿಶ್ರವಸ್, ಶಕ್ತಿ, ವಾಲಖಿ ಅರ್ವತ ಮುಂತಾದ ಮುನಿಗಳು ತಪಸ್ಸ ಮಾಡಿ ಶ್ರೀ ಹರಿಯನ್ನು ಮೆಚ್ಚಿಸಿ ಅ ಅನುಗ್ರಹದಿಂದ ಋಷಿಗಳಾದರು.

**ಋಷೀಕ :**

ವತ್ಸರೋ ನಗ್ನಹೂಶ್ಚೈವ
ಭರದ್ವಾಜಸ್ತಥೈವ ಚ ।
ಋಷಿ ದೀರ್ಘತಮಾಶ್ಚೈವ
ಬೃಹದುತ್ಥಃ ಶರದ್ವತಃ ॥
ವಾಜಶ್ರವಾಃ ಸುಚಿತ್ತಶ್ಚ
ವಶ್ಯಾಶ್ವಶ್ಚ ಪರಾಶರಃ

ಋಥೀಚಃ ಶಂಶಪಾಶ್ಚೈವ
ರಾಜಾ ವೈಶ್ರವಣಸ್ತಥಾ
ಇತ್ಯೇತೇ ಋಷಿಕಾಃ ಪ್ರೋಕ್ತಾಃ
ತೇ ಸತ್ಯಾದೃಷಿತಾಂ ಗತಾಃ ॥

ವತ್ಸರ, ನಗ್ನಹೂ, ಭರದ್ವಾಜ, ದೀರ್ಘತಮ ಬೃಹದುತ್ಥ, ಶರದ್ವತ, ವಾಜಶ್ರವ, ಸುವಿತ್ತ, ವಶ್ಯಾಶ್ವ, ಪರಾಶರ, ಋಥೀಚಿ, ಶಂಶಪ, ವೈಶ್ರವಣ ಮುಂತಾದ ಮುನಿಗಳೆಲ್ಲರೂ ತಮ್ಮ ತಪಃ ಪ್ರಭಾವದಿಂದ ಸತ್ಯದ ಸಾಕ್ಷಾತ್ಕಾರ ಮಾಡಿಕೊಂಡಿದ್ದರಿಂದಲೂ ಹಿಂದೆ ಹೇಳಿದ ಋಷಿಗಳ ಔರಸ ಪುತ್ರರಾದುದರಿಂದಲೂ 'ಋಷೀಕ' ಎಂದು ಕರೆಯಲ್ಪಡುತ್ತಾರೆ.

## ವೇದೋತ್ತರಕಾಲದ ಋಷಿಗಳು

ಈ ವರೆಗಿನ ನಿರೂಪಣೆಯು ಸಾಮಾನ್ಯವಾಗಿ ವೇದಕಾಲದ ಮಂತ್ರದ್ರಷ್ಟಾರರಾದ ಋಷಿಗಳ ವಿಚಾರವಾಯಿತು. ವೇದೋತ್ತರ ಕಾಲದಲ್ಲಿಯೂ ಅನೇಕ ಮುನಿಪುಂಗವರು ಜನಿಸಿ ತಮ್ಮ ದಿವ್ಯವಾದ ಜ್ಞಾನದೀಧಿತಿಯಿಂದ ಜನರನ್ನು ಉದ್ಧರಿಸಿದ್ದಾರೆ. ಅವರಲ್ಲಿ ಎಷ್ಟೋ ಜನರು ಋಷಿಗಳಾದರೆ ಹಲವರು ಮಹರ್ಷಿಗಳು ಮತ್ತೆ ಕೆಲವರು ಬ್ರಹ್ಮರ್ಷಿಗಳೂ ಆಗಿದ್ದಾರೆ ಅವರ ಕಥೋಪಕಥೆಗಳು ಪುರಾಣವಾಙ್ಮಯವನ್ನೆಲ್ಲ ವ್ಯಾಪಿಸಿ ನಿಂತಿವೆ ಇಂಥ ವೇದೋತ್ತರ ಕಾಲದ ಮಹರ್ಷಿಗಳು ಲಕ್ಷಣವನ್ನು ವಾಯುಪುರಾಣದ ಹಿಂದು ವಚನದಿಂದ ನಾವು ಅರಿಯಬಹುದು.

ಋಷಿಯಃ ಸಂಶಿತಾತ್ಮಾನಃ
ಸತ್ಯವ್ರತಪರಾಯಣಾಃ
ಋಜವೋ ನಷ್ಟರಜಸಃ
ಶಾಂತಾ ದಾಂತಾ ಜಿತೇಂದ್ರಿಯಾಃ ॥

ಈ ಲಕ್ಷಣವು ವೇದಕಾಲದ ಋಷಿಗಳಿಗೂ ವೇದೋತ್ತರಕಾಲದ ಋಷಿಗಳಿಗೂ ಸಮನಾಗಿಯೇ ಅನ್ವಯಿಸುವುದು.

ಆತ್ಮಶುದ್ಧಿಯಿಂದ ವ್ರತ ನಿಯಮನಿಷ್ಠರಾಗಿ ಸತ್ಯವನ್ನು ಸಾಕ್ಷಾತ್ಕರಿಸಿಕೊಂಡವರೇ ಋಷಿಗಳು. ಸರಳತೆ, ನಿಷ್ಕಾಪಟ್ಯ ಅವರ ಮೂಲಸ್ವಭಾವ. ಅಲ್ಲಿ ರಜೋಗುಣದ ವಿಕಾರಗಳಿಗೆ ಎಡೆ ಇಲ್ಲವೇ ಇಲ್ಲ. ಶಾಂತಿ ಅವರ ಜೀವನದ ಉಸಿರು. ಅವರ ತಾರಕ ಶಕ್ತಿ ಜಗವನ್ನೆ ಕೈಯಲ್ಲಿ. ಇಂದ್ರಿಯಗಳೆಲ್ಲ ಅಂಥವರ ಕಿಂಕರರಾಗಿರುತ್ತವೆ. ಇಂಥ ಮಹನೀಯರಿಗೆ 'ಋಷಿ' ಎಂಬ ಪದವಿ ಸಲ್ಲುತ್ತದೆ ಇದು ನಿಷ್ಕೃಷ್ಟವಾದ ನಿರ್ದುಷ್ಟ ಋಷಿಲಕ್ಷಣ ಎಂದು ಹೇಳಬಹುದು.

ಇದರಲ್ಲಿ 'ಮಂತ್ರದ್ರಷ್ಟೃತ್ವ'ವ ಸೇರಲಿಲ್ಲ ಅದು ವೇದಕಾಲಕ್ಕೆ ಮಾತ್ರ ಸೀಮಿತ

ಆದುದರಿಂದಲೇ ಬ್ರಹ್ಮಾಂಡ ಪುರಾಣದಲ್ಲಿ

ಮಂತ್ರಾಃ ಪ್ರಾದುರ್ಬಭೂವುರ್ಹಿ
ಪೂರ್ವ ಮನ್ವಂತರೇಷ್ವಿಹ ।

'ಮಂತ್ರಗಳೆಲ್ಲವೂ ಪೂರ್ವಮನ್ವಂತರದಲ್ಲಿಯೇ ಆವಿಷ್ಕಾರಗೊಂಡವು' ಎಂದು ಹೇಳಿದ್ದಾರೆ.

ಹಿಂದಿನ ಮನ್ವಂತರಗಳಲ್ಲಿ ವೇದದರ್ಶನ ಮುಗಿದು ಹೋದರೂ ಋಷಿಗಳು ಮಾತ್ರ ಎಲ್ಲ ಮನ್ವಂತರಗಳಲ್ಲಿಯೂ ಜನಿಸುತ್ತಾರೆ. ಆದುದರಿಂದ ಈ ವಾಯುಪುರಾಣದ ಋಷಿಲಕ್ಷಣದಲ್ಲಿ 'ಮಂತ್ರದರ್ಶಿತ್ವ'ವು ಘಟಕವಾಗಿಲ್ಲ. ಇಷ್ಟೆಲ್ಲ ಸದ್ಗುಣಗಳ ಸಮ್ಮೇಲನವಾಗಿ ತಪಶ್ಶಕ್ತಿ ಹಾಗೂ ಶ್ರೀಹರಿಯ ಅನುಗ್ರಹ ಇದ್ದ ಬಳಿಕ 'ಮಂತ್ರದ್ರಷ್ಟೃತ್ವ' ಇಲ್ಲದಿದ್ದರೂ 'ಋಷಿ' ಆಗಲು ಯಾವ ಅಭ್ಯಂತರವೂ ಇಲ್ಲ ಎಂದು ವೇದವ್ಯಾಸರ ವಾಯುಪುರಾಣ ಮತ್ತು ಭಾರತದ ಅನೇಕ ವಚನಗಳು ಧೃಡಪಡಿಸುತ್ತವೆ.

ಇಂಥ ಅನೇಕಾನೇಕ ವೇದಕಾಲದ ಮತ್ತು ವೇದೋತ್ತರ ಪುರಾಣಕಾಲದ ಋಷಿಗಳ ಮನೆತನಗಳು ಹಿಂದೆ ಭಾರತವರ್ಷದಲ್ಲಿ ವಿಪುಲವಾಗಿದ್ದವು. ಅವುಗಳಲ್ಲಿ ಹಲಕೆಲವು ಸುಪ್ರಸಿದ್ಧ ಋಷಿಕುಲಗಳ ಉಲ್ಲೇಖವು ಮತ್ಸ್ಯಪುರಾಣ, ಬ್ರಹ್ಮಾಂಡಪುರಾಣ, ವಾಯುಪುರಾಣ, ಹರಿವಂಶ ಮುಂತಾದ ಪುರಾಣಗಳಲ್ಲಿ ಇದ್ದದ್ದು ಕಂಡುಬರುತ್ತದೆ.

## ಋಷಿಕುಲ ಧುರೀಣರು

ವಾಸಿಷ್ಠರು: ವಸಿಷ್ಠ, ಶಕ್ತಿ, ಪರಾಶರ, ಇಂದ್ರಪ್ರಮಾಥಿ, ಭರದ್ವಸು, ಮೈತ್ರಾ-ವರುಣಿ, ಕುಂಡಿನ.

ಕಾಶ್ಯಪರು: ಕಶ್ಯಪ, ವತ್ಸಾರ, ನೈಧ್ರುವ, ಕೈಧ್ಯ, ಅಸಿತ ದೇವಲ.

ಆತ್ರೇಯರು: ಅತ್ರಿ, ಅರ್ಚನಾನ, ಶ್ಯಾವಾಶ್ವ, ಗವಿಷ್ಠಿರ, ಅವಿಹೋತ್ರ, ಪೂರ್ವಾತಿಥಿ.

ಕೌಶಿಕರು: ವಿಶ್ವಾಮಿತ್ರ, ದೇವರಾತ, ಉದ್ಗಲ, ಮಧುಚ್ಛಂದ, ಅಘಮರ್ಷಣ, ಅಷ್ಟಕ, ಲೋಹಿತ, ಕತ, ಕೀಲ, ದೇವಶ್ರವ, ರೇಣು, ಪೂರಣ, ಧನಂಜಯ.

ಆಗಸ್ತ್ಯರು: ಅಗಸ್ತ್ಯ ದೃಢದ್ಯುಮ್ನ, ಇಂದ್ರಬಾಹು.

ಆಂಗಿರಸರು: ಅಂಗಿರಾ, ತ್ರಿತ, ಭರದ್ವಾಜ, ಋತುವಾಕ್, ಗರ್ಗ, ಶಿನಿ, ಸಂಕೃತಿ ಗುರುವೀತ, ಕಷೀವಾನ್, ದೀರ್ಘತಮ, ಶರದ್ವಾನ್, ಉತಥ್ಯ, ಮುದ್ಗಲ, ಕಣ್ವ, ವಿರೂಪ, ವೃಷದಶ್ವ, ಕಪಿ, ಋಷಭ, ಅಜಮೀಢ ಅಹಾರ್ಯ, ಬೃಹದುತ್ಥ, ಅಸಿಜ, ವಾಮದೇವ, ಸುವಿತ್ತಿ, ಅಯಾಸ್ಯ, ವಾಜಶ್ರವಾ, ಸುದಸ್ಯುಮಾನ್, ತ್ರಸದಸ್ಯು, ಪುರುಕುತ್ಸ, ಯುವನಾಶ್ವ, ಅಂಬರೀಷ, ಮಾಂಧಾತಾ.

ಭಾರ್ಗವರು: ಭೃಗು, ಶುಕ್ರ, ಪ್ರಚೇತಾ, ದಧ್ಯಜ, ಆಪ್ನವಾನ್, ಋಚೀಕ, ಜಮದಗ್ನಿ, ವಿದ, ಸಾರಸ್ವತ, ಆರ್ಷ್ಟಿಷೇಣ, ಚ್ಯವನ, ವೀತಹವ್ಯ, ಸುಮೇಧ, ವೈನ್ಯ ಪೃಥು, ದಿವೋದಾಸ, ವಾಧ್ರ್ಯಶ್ವ, ಗೃತ್ಸಮದ, ಶೌನಕ

ಇಂಥ ಋಷಿಗಳ ತೊಂಭತ್ತೆರಡು ಪಾವನ ಕುಟುಂಬಗಳ ಉಲ್ಲೇಖವು ಮತ್ಸ್ಯಪುರಾಣದಲ್ಲಿಯೂ ತೊಂಭತ್ತು ಋಷಿ ಮನೆತನಗಳ ಒಣ್ಣನೆಯು ಬ್ರಹ್ಮಾಂಡ ಪುರಾಣದಲ್ಲಿಯೂ ಬಂದಿದೆ. ಇನ್ನು ಋಗ್ವೇದ ಯಜುರ್ವೇದಾದಿ ಮಂತ್ರಗಳ ಒಂದೊಂದು ಸೂಕ್ತ ಹಾಗೂ ಋಕ್ಕುಗಳ ದ್ರಷ್ಟಾರರನ್ನು ಲೆಕ್ಕಕ್ಕೆ ತೆಗೆದುಕೊಂಡರೆ ಅನೇಕ ಸಹಸ್ರ ಋಷಿಗಳು ಈ ಭಾರತಭೂಮಿಯಲ್ಲಿ ಹಿಂದೆ ಬೆಳಗಿ ಹೋಗಿದ್ದು ತಿಳಿದುಬರುತ್ತದೆ.

ಅಸಂಖ್ಯರಾದ ಈ ಎಲ್ಲ ಋಷಿಗಳ ಜೀವನ ಚರಿತ್ರೆಯನ್ನು ಯಾರಿಗೂ ಪೂರ್ಣ ಬರೆಯಲು ಸಾಧ್ಯವಿಲ್ಲ. ವೇದ, ಪುರಾಣ, ಉಪನಿಷತ್ತು, ಆರಣ್ಯಕ, ಬ್ರಾಹ್ಮಣ, ಮಹಾಭಾರತ ಮುಂತಾದ ಗ್ರಂಥಗಳಲ್ಲಿ ಎದ್ದು ತೋರುವ ಕೆಲವು ಋಷಿಗಳ ಜೀವನ ಚರಿತ್ರೆಯನ್ನು ಪರಾಮರ್ಶಿಸಿದರೂ ನಮ್ಮ ಬರಡು ಬದುಕಿಗೊಂದು ಭರವಸೆ ದೊರಕುತ್ತದೆ. ★

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ(ವೈಕುಂಠ) ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.

* ಸರತಿಯ ಸಾಲಿನ ಕೋಣೆಗಳಲ್ಲಿ ಅಲ್ಪಾಹಾರ ಸೌಲಭ್ಯ.

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು.

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ.

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7-ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ. ಗೋವಿಂದ ಪ್ರಸಾದ ಕ್ಯಾಂಟೀನ್,

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ. ಹಾಗೂ ಉಚಿತ ಬಸ್ ಸೌಕರ್ಯ.

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.

* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಕೆ : ತಿರುಮಲೆಯಲ್ಲಿ* ಅಂಚೆ ಕಚೇರಿಯು ರಾತ್ರಿ 8-30 ಗಂಟೆಯವರೆಗೆ ಕೆಲಸಮಾಡುತ್ತದೆ, ಜೊತೆಗೇ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯವರೆಗೆ ಕೆಲಸಮಾಡುತ್ತದೆ.

# ವಾರ್ತಾಲಹರಿ

## ಅನ್ನಮಾಚಾರ್ಯರ 579 ನೇ ಜಯಂತಿ ಉತ್ಸವ

ಅನ್ನಮಾಚಾರ್ಯ ಶ್ರೀ ವೆಂಕಟೇಶ್ವರ ಸ್ವಾಮಿಯ ಬಹು ಶ್ರೇಷ್ಠ ಭಕ್ತರು. ಸ್ವಾಮಿಯ ಸೇವೆಯಲ್ಲಿ ಮೂವತ್ತೆರಡು ಸಾವಿರಕ್ಕೂ ಮಿಕ್ಕಿದ ಕೀರ್ತನೆಗಳನ್ನೂ ಹಲವಾರು ಕಾವ್ಯಗಳನ್ನೂ ಬರೆದ ಶ್ರೇಷ್ಠ ಕವಿ. 500 ವರ್ಷಗಳ ಹಿಂದೆ ಎಲ್ಲರೂ ನಡೆದಾಡುವ ಭೂಮಿಯೊಂದೇ ಎನ್ನಲು, ಎಲ್ಲರಲ್ಲಿರುವ ಆತ್ಮವೊಂದೇ ಎನ್ನಲು, ಎಲ್ಲರಿಗೂ ದೈವವೊಂದೇ ಎನ್ನಲು, ಬಿನ್ನಾಭಿಪ್ರಾಯಗಳು ಭೇದಗಳು ಎಲ್ಲಿಯವು, ಎಂದು ಪ್ರಶ್ನಿಸಿ ಸಮಾನತೆಯ ಘೋಷಣೆ ಮಾಡಿದ ಸಮಭಾವಿ, ಅನುಭಾವಿ.

ಅಂತಹ ಹಿರಿಯ ಕವಿಪುಂಗವ ಅನ್ನಮಾಚಾರ್ಯರ ಜಯಂತಿ ವರ್ಧಂತಿ ಸಂದರ್ಭಗಳನ್ನು ತಿ. ತಿ. ದೇ. ಆಚರಿಸುತ್ತ ಬರುತ್ತಿದ್ದು ಆ ಮೂಲಕವಾಗಿ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಏಕತೆ; ಸೌಹಾರ್ದಗಳನ್ನು ಹರಡುತ್ತಿರುವುದು ಸಂಪ್ರದಾಯವೇ ಆಗಿದೆ. ಪ್ರಸ್ತುತ ವರ್ಷ 13–5–87 ರಿಂದ 19–5–87 ರವರೆಗೆ ಒಂದು ವಾರಕಾಲ ಅನ್ನಮಾಚಾರ್ಯರ 579 ನೇ ಜಯಂತಿ ಉತ್ಸವಗಳನ್ನು ತಿರುಪತಿಯಲ್ಲಿ ಘನವಾಗಿ ಆಚರಿಸಲಾಯಿತು.

13–5–87 ರಂದು ಬೆಳಗ್ಗೆ ತಿ. ತಿ. ದೇ. ಪರಿಪಾಲನಾ ಭವನದಿಂದ ಅನ್ನಮಾಚಾರ್ಯರ ಪ್ರತಿಮೆ ಹಾಗೂ ಶ್ರೀ ವೆಂಕಟೇಶ್ವರಸ್ವಾಮಿ ಚಿತ್ರಪಟಗಳನ್ನು ಮೆರವಣಿಗೆಯಲ್ಲಿ ಅನ್ನಮಾಚಾರ್ಯ ಕಲಾಮಂದಿರಕ್ಕೆ ತರಲಾಯಿತು. ನಂತರ ಸೀತಾರಾಮ ಲಕ್ಷ್ಮಣರ ಉತ್ಸವ ವಿಗ್ರಹಗಳನ್ನು ಅಲ್ಲಿಗೆ ಬಿಜಯಗೈಸಿ ಅವರ ಸನ್ನಿಧಿಯಲ್ಲಿ ಶ್ರೀ ನಾಮಗಿರಿಪೇಟೆ ಕೃಷ್ಣನ್ ಅವರ ನಾದಸ್ವರ ಕಚೇರಿಯೂ, ಪ್ರಾಜೆಕ್ಟ್ ಕಲಾವಿದರ ಬೃಂದಗಾನವೂ ನಡೆದವು. ನಂತರ ತಿ. ತಿ. ದೇ. ಅಧ್ಯಕ್ಷ ಶ್ರೀ ದೇವಿನೇನಿ ಸೀತಾರಾಮಯ್ಯನವರ ಅಧ್ಯಕ್ಷತೆಯಲ್ಲಿ ನಡೆದ ಆರಂಭೋತ್ಸವದಲ್ಲಿ ಆಂಧ್ರ ಪ್ರದೇಶದ ಮುಜರಾಯಿ ಇಲಾಖಾಮಂತ್ರಿ ಶ್ರೀ ಯತಿರಾಜಾರಾವ್ ಅವರು ಜ್ಯೋತಿ ಬೆಳಗುವುದರ ಮೂಲಕ ಉತ್ಸವವನ್ನು ಉದ್ಘಾಟಿಸಿ, ಅನ್ನಮಾಚಾರ್ಯರ ಕೀರ್ತನೆಗಳಲ್ಲಿನ ಸಮಾಜ ಸಂಸ್ಕರಣ ಇಂದಿಗೂ ಅಗತ್ಯವೇ ಆಗಿದೆ ಎಂದು ಅನ್ನಮಾಚಾರ್ಯರ ಕೃತಿಗಳ ಹಿರಿಮೆಯನ್ನು ಶ್ಲಾಘಿಸಿದರು. ಅನ್ನಮಾಚಾರ್ಯರು ಅಲಮೇಲು ಮಂಗಾದೇವಿಯ ಬಗ್ಗೆ ಹಾಗೂ ಹನುಮಂತನ ಬಗ್ಗೆ ರಚಿಸಿದ ಕೃತಿಗಳ ಎರಡು ಕ್ಯಾಸೆಟ್‌ಗಳನ್ನು ಬಿಡುಗಡೆ ಮಾಡಿ, ಅನ್ನಮಯ್ಯ ವಂಶಸ್ಥರನ್ನು ಸನ್ಮಾನಿಸಿದರು.

ಅಧ್ಯಕ್ಷಸ್ಥಾನದಿಂದ ಮಾತನಾಡಿದ ಶ್ರೀ ಡಿ. ಸೀತಾರಾಮಯ್ಯನವರು ಅನ್ನಮಾಚಾರ್ಯರ ಕೃತಿಗಳು ಊರೂರು ಗ್ರಾಮಗ್ರಾಮಗಳಲ್ಲೂ ಕೇಳಿ ಬಂದು ಆ ಮೂಲಕ ಸೌಹಾರ್ದ ಹೆಚ್ಚಲಿ ಎಂದು ಹಾರೈಸಿದರು.

ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಸಿ. ಎಚ್. ವೆಂಕಟಪತಿರಾಜು ಅವರು ಸ್ವಾಗತಿಸಿದ ಸಭೆಯಲ್ಲಿ ಪ್ರಾಜೆಕ್ಟ್ ವಿಶೇಷಾಧಿಕಾರಿ ಶ್ರೀ ಮೇಡಸಾನಿ ಮೋಹನ್ ಅವರು ವರದಿಯನ್ನು ಓದಿದರು. ತಿ. ತಿ. ದೇ. ಸಂರಕ್ಷಣಾಧಿಕಾರಿ ಶ್ರೀ ಎಸ್. ಕೆ. ಜಯಚಂದ್ರ ಅವರು ಸಭೆಯನ್ನು ವಂದಿಸಿದರು. ನಂತರ ಹೈದರಾಬಾದಿನ ಶ್ರೀಮತಿ ರಾಜೇಶ್ವರಿ ಶ್ರೀನಿವಾಸ್ ವೃಂದದವರ ಗಾಯನ ಸಭೆ ಕರ್ಣರಸಾಯನವಾಗಿ ನಡೆಯಿತು.

ಅಂದು ಸಂಜೆ ತಿ. ತಿ. ದೇ. ಪರಿಪಾಲನಾ ಭವನದ ಹಿಂದಿನ ಬಯಲು ರಂಗಮಂಟಪದಲ್ಲಿ ಶ್ರೀ ಐ. ವಿ ಸೀತಾಪತಿರಾವ್ ಅವರು ಅನ್ನಮಾಚಾರ್ಯರ ಕೃತಿಗಳಲ್ಲಿನ ಸಂಗೀತ ವೈವಿಧ್ಯವನ್ನು ಕುರಿತು ಉತ್ಕೃಷ್ಟವಾದ ಪ್ರಾತ್ಯಕ್ಷಿಕೆಯನ್ನು ನೀಡಿದರು. ನಂತರ ಪ್ರಾಜೆಕ್ಟ್ ಕಲಾವಿದರಿಂದ 'ಹರಿಸಂಕೀರ್ತನಾಮೃತ' ವಿತರಣೆ ಆಯಿತು. ಶ್ರೀ ಅನ್ನವರಪು ರಾಮಸ್ವಾಮಿ ವೃಂದದವರಿಂದ ಪಯೋಲಿನ್ ಘನವಾಗಿ ನಿನದಿಸಿತು.

14 ರಂದು ಬೆಳಗ್ಗೆ ಅನ್ನಮಾಚಾರ್ಯ ಕಲಾಮಂದಿರದಲ್ಲಿ ಶ್ರೀ ಪಿ. ವಿ. ಶ್ರೀನಿವಾಸಮೂರ್ತಿಯವರು ಅನ್ನಮಾಚಾರ್ಯ ಸಂಕೀರ್ತನೆಗಳ ವ್ಯಾಕರಣ ವಿಶ್ಲೇಷಣೆ ನಡೆಸಿದರು. ನಂತರ ಕುಮಾರಿ ವಿ. ಟಿ. ಎಸ್. ಗೀತ ಅವರ ಗಾಯನ ಸಭೆಯೂ, ಶ್ರೀ ಡಿ. ವಿ. ಎಸ್. ಸುರೇಶರಾವ್ ಅವರ ಗಾಯನ ಸಭೆಯೂ ನಡೆದವು.

ಅಂದುಸಂಜೆ ಬಯಲು ರಂಗಮಂದಿರದಲ್ಲಿ ಶ್ರೀ ಎ. ವಿ. ಎಸ್. ಕೃಷ್ಣಾರಾವು, ವೃಂದವರಿಂದ ಸಂಗೀತ ಸಭೆಯೂ, ಶ್ರೀ ಕನ್ನಕ್ಕುಡಿ ಆರ್. ರಾಮನಾಥನ್ ವೃಂದವರ ವಯೋಲಿನ್ ಸಭೆಯೂ ನಡೆದವು.

15 ರಂದು ಬೆಳಗ್ಗೆ ಅನ್ನಮಾಚಾರ್ಯ ಕಲಾಮಂದಿರದಲ್ಲಿ ಶ್ರೀ ಮುದಿವರ್ತಿ ಕೊಂಡಮಾಚಾರ್ಯರು ಅನ್ನಮಾಚಾರ್ಯರ ಕವಿತಾವೈಭವವನ್ನೂ, ದೈವಭಕ್ತಿ ಹೇಗೆ ಕಾವ್ಯವಾಗಿದೆಯೆಂಬುದನ್ನೂ ವಿವರಿಸಿದರು. ನಂತರ ಶ್ರೀ ಅರ್ರಾಕೃಷ್ಣಮೂರ್ತಿ ಅವರ ಗಾನ ಕಚೇರಿ ನಡೆಯಿತು. ಅನ್ನಮಾಚಾರ್ಯರ ಕೃತಿಗಳನ್ನು ಅಭಿನಯಕ್ಕೆ ಅಳವಡಿಸಿದ ಕುಮಾರಿ ಶ್ರೀವಾಣಿ ವೃಂದ ಹಾಗೂ ಶ್ರೀ ಲೋಕಾಭಿರಾಮ್ ಶಿಷ್ಯವೃಂದದವರ ಅನ್ನಮಯ್ಯ ಸಂಕೀರ್ತನ ನೃತ್ಯಾಂಜಲಿ ಆಕರ್ಷಿಸಿತು.

ಅಂದು ಸಂಜೆ ಬಯಲು ರಂಗ ಮಂಟಪದಲ್ಲಿ ಶ್ರೀ ಬಸವರಾಜು ಸೋದರರು ಕೊಳಲು ವಯೋಲಿನ್ ಯುಗಳಬಂಧವನ್ನೂ, ಶ್ರೀಮಹಾರಾಜಪುರಂ ಸಂತಾನಂ ಅವರ ಗಾಯನ ಗೋಷ್ಠಿಯನ್ನೂ ಜನ ಆನಂದದಿಂದ ಕೇಳಿದರು.

16 ರಂದು ಪ್ರಾತಃಕಾಲ ಅನ್ನಮಾಚಾರ್ಯ ಕಲಾಮಂದಿರದಲ್ಲಿ ಆಚಾರ್ಯ ಡಾ॥ ಟಿ. ಕೋಟೀಶ್ವರರಾವು ಅವರು ಉಪನ್ಯಾಸ ಮಾಡಿದರು. ನಂತರ ಶ್ರೀ ಕೆ. ವೆಂಕಟಶಿವಯ್ಯನವರ ನಿರ್ವಹಣೆಯಲ್ಲಿ ವೈಕುಂಠ ಸಾಹಿತ್ಯ ಸಭೆ ಯಶಸ್ವಿಯಾಯಿತು. ಇಲ್ಲಿ ಶ್ರೀ ಕೆ. ವೆಂಕಟಶಿವಯ್ಯ ಶ್ರೀಮನ್ನಾರಾಯಣನಾಗಿಯೂ, ಪೋತನನಾಗಿ ಡಾ॥ ಪ್ರಸಾದರಾಯಕುಲಪತಿ, ಕೃಷ್ಣದೇವರಾಯನಾಗಿ ಶ್ರೀ ಎಂ. ವೃಷಾದ್ರಿಪತಿ, ಅನ್ನಮಾಚಾರ್ಯರಾಗಿ ಶ್ರೀ ಪಿ. ಎಸ್. ರಂಗನಾಥ್, ತ್ಯಾಗರಾಜರಾಗಿ ಶ್ರೀ ಅರ್ರಾಕೃಷ್ಣಮೂರ್ತಿ, ವೈಷ್ಣವ ಗಾಯನಿಯಾಗಿ ಶ್ರೀಮತಿ ರಾಳ್ಳಪಲ್ಲಿ ಸುಭದ್ರ, ಕ್ಷೇತ್ರಯ್ಯನಾಗಿ ಶ್ರೀ ರಾಜನ್ನ ಕವಿ, ಪಾಲುಗೊಂಡರು

ಅಂದು ಸಂಜೆ ಬಯಲು ರಂಗಮಂಟಪದಲ್ಲಿ ಶ್ರೀಮತಿ ಚಾರುಮತಿ ರಾಮಚಂದ್ರನ್ ಸಂಗೀತ

ಸಭೆ, ಶ್ರೀ ಚಿಟ್ಟಿಬಾಬು ವೃಂದದವರಿಂದ ವೀಣಾ ಕಚೇರಿ ನಡೆದವು.

17 ರಂದು ಭಾನುವಾರ ಬೆಳಗ್ಗೆ ಅನ್ನಮಾಚಾರ್ಯ ಕಲಾಮಂದಿರದಲ್ಲಿ ಪ್ರಾಜೆಕ್ಟ್ ವಿಶೇಷಾಧಿಕಾರಿ ಡಾ॥ ಮೇಡಸಾನಿ ಮೋಹನ್ ಅವರ ಚತುರ್ಗುಣಿತ ಅಷ್ಟಾವಧಾನ ತಿ ತಿ ದೇ. ಸಂರಕ್ಷಣಾಧಿಕಾರಿ ಶ್ರೀ ಎಸ್. ಕೆ. ಜಯಚಂದ್ರ ಅವರ ಅಧ್ಯಕ್ಷತೆಯಲ್ಲಿ ಘನವಾಗಿ ನಡೆಯಿತು.

ಅಂದು ಸಂಜೆ ಬಯಲು ರಂಗ ಮಂದಿರದಲ್ಲಿ ಕುಮಾರಿ ಎ. ಸುಧಾರಾಣಿ ವೃಂದದ ಗಾಯನ ಸಭೆಯೂ, ಡಾ॥ ರಮಣಿ ವೃಂದದ ಕೊಳಲು ಕಚೇರಿಯೂ ಯಶಸ್ವಿಯಾಗಿ ನಡೆದವು.

18 ರಂದು ಅನ್ನಮಾಚಾರ್ಯ ಕಲಾಮಂದಿರದಲ್ಲಿ ಬೆಂಗಳೂರಿನ ಶ್ರೀ ತಂಗಿರಾಲ ವೆಂಕಟಸುಬ್ಬಾರಾವು ಅವರು ಉಪನ್ಯಾಸ ನೀಡಿದರು. ಕು॥ ಎಂ. ಸ್ವಪ್ನ ವೃಂದದವರ ಭರತನಾಟ್ಯ ಸರ್ವರನ್ನೂ ಮೆಚ್ಚಿಸಿತು. ನಂತರ ಎಸ್. ಉಮಾಪತಿ ಅವರ ಸಂಗೀತ ಸಭೆ ನಡೆಯಿತು.

ಅಂದು ಸಂಜೆ ಬಯಲು ರಂಗ ಮಂಟಪದಲ್ಲಿ ಶ್ರೀಮತಿ ಆರ್. ಛಾಯಾದೇವಿ ಅವರ ಗಾಯನ ಸಭೆಯು ನಂತರ ಇಂಡಿಯನ್ ಬ್ಯಾಲೆ ಥಿಯೇಟರಿನ ಮಾಸ್ಟರ್ ರಮಣ ವೃಂದದವರ ಅನ್ನಮಯ್ಯ ನೃತ್ಯ ವಿಭಾವರಿ ಕಾರ್ಯಕ್ರಮವಿದ್ದಿತು.

19 ರಂದು ಬೆಳಗ್ಗೆ ಅನ್ನಮಾಚಾರ್ಯ
ಮಂದಿರದಲ್ಲಿ ಶ್ರೀಗೋವಿಂದರಾಜಸ
ಆಸ್ಥಾನ ಪಾಜೆಕ್ಟ್ ಕಲಾವಿದರಿಂದ ಸಂಕೀ
ಪೂಜೆ,ನಂತರ ಶ್ರೀ ಪಿ.ಕೆ. ಶ್ರೀನಿವಾಸನ್ ವೃ
ದವರಿಂದ ಗಾಯನ ಸಭೆ, ಶ್ರೀಮತಿ ಸಿ ಸ
ಅವರಿಂದ ಗಾಯನ ಸಭೆಗಳು ನಡೆದವು.

ಅಂದು ಸಂಜೆ ಬಯಲು ರಂಗಮಂಟಪ
ಅನ್ನಮಾಚಾರ್ಯ ಜಯಂತಿ ಉತ್ಸವದ ಸ
ರೋಪ ಸಮಾರಂಭ. ಚಿತ್ತೂರು ಜಿಲ್ಲಾಧಿ
ಶ್ರೀ ಪರಮಹಂಸ ಅವರ ಅಧ್ಯಕ್ಷತೆಯಲ್ಲಿ ನ
ಸಭೆಯಲ್ಲಿ ಶ್ರೀ ಪದ್ಮಾವತಿ ವಿಶ್ವವಿದ್ಯಾಲ

---

# ತಿ.ತಿ.ದೇ. ಆಡಳಿತ ನಿರ್ವಾಹಕ ಮಂಡಳಿಯ ತೀರ್ಮಾನಗಳು

## (13-5-1987 ಹಾಗೂ 14-5-87)

ತಿ. ತಿ. ದೇ. ಗಳ ವೈದ್ಯರಾದ ಶ್ರೀ ವಿ. ಹರನಾಥ್ ಅವರಿಗೆ ಡೆಪ್ಯೂಟಿ ಸಿವಿಲ್ ಸರ್ಜನ್ ಪದವಿಗೆ ತಾತ್ಕಾಲಿಕ ಬಡ್ತಿ ನೀಡಲು ತೀರ್ಮಾನಿಸಲಾಯಿತು.

* * * *

ಕರ್ನೂಲ್ ಜಿಲ್ಲೆಯ ಮಧುಬನದ ನಿವೃತ್ತ ಐ. ಎ. ಎಸ್. ಅಧಿಕಾರಿ ಶ್ರೀ ಆರ್. ಪಿ. ಕಪೂರ್ ಅವರು ತಮ್ಮ ಹೆಸರಿನ ಹಲವಾರು ಷೇರುಗಳನ್ನು ತಿ. ತಿ. ದೇ. ಗಳಿಗೆ ನೀಡಿರುವಿಕೆಯನ್ನು ಅಂಗೀಕರಿಸಲಾಯಿತು.

* * * *

ಆಂಧ್ರ ಪ್ರದೇಶದ ಟೂರಿಜಂ ಡೆವಲಪ್‌ಮೆಂಟ್ ಕಾರ್ಪೊರೇಷನ್‌ಗೆ ತಿರುಪತಿಯಲ್ಲಿ ತಮ್ಮ ಸಾರಿಗೆವಿಭಾಗವನ್ನು ಆರಂಭಿಸಲು ಅನುಕೂಲವಾಗುವಂತೆ ಮೊದಲ ಸತ್ರದಲ್ಲಿ ಸ್ಥಳವನ್ನು ಮೂರುವರ್ಷಗಳ ಕಾಲ ನೀಡಲು (ಬಾಡಿಗೆಗೆ) ಅಂಗೀಕರಿಸಲಾಯಿತು.

* * * *

ವಿಕಲಾಂಗರಾದ ಶ್ರೀಮತಿ ವಿ. ಲಕ್ಷ್ಮೀದೇವಿಯವರಿಗೆ ತಿರುಪತಿಯ ಶ್ರೀಗೋವಿಂದರಾಜಸ್ವಾಮಿ ದೇವಾಲಯದ ಗೋಪುರದ ಕೆಳಗೆ ಅಂಗಡಿಗಾಗಿ ಲೀಜ್ ಕಾಲವನ್ನು ಒಂದು ವರ್ಷಕ್ಕೆಂದು ತಿಂಗಳಿಗೆ 50 ರೂಗಳ ಬಾಡಿಗೆಯಲ್ಲಿ ಮುಂದುವರೆಸಲು ತೀರ್ಮಾನಿಸಲಾಯಿತು.

* * * *

ಕೃಷ್ಣಾ ಜಿಲ್ಲೆಯ ನಂದಿಗಾಂ ಹಾಗೂ ಪಶ್ಚಿಮ ಗೋದಾವರಿ ಜಿಲ್ಲೆಯ ಕೊಯ್ಯಲಗೂಡೆಂಗಳಲ್ಲಿ ಕಲ್ಯಾಣಮಂಟಪಗಳನ್ನು ನಿರ್ಮಿಸಲು ತೀರ್ಮಾನಿಸಲಾಯಿತು.

* * * *

ತಿ. ತಿ. ದೇ. ನಿರ್ಮಿಸಿದ ಕಲ್ಯಾಣಮಂಟಪಗಳಲ್ಲಿ ರಾಜ್ಯರಾಜಧಾನಿಗಳಲ್ಲಿನ ಹಾಗೂ ಜಿಲ್ಲಾ ಕೇಂದ್ರಗಳ ಕಲ್ಯಾಣ ಮಂಟಪಗಳ ಆಡಳಿತವನ್ನು ತಿ. ತಿ. ದೇ. ಗಳೇ ನೋಡಿಕೊಳ್ಳುವುದಾಗಿಯೂ, ಮಿಕ್ಕಂತೆ ಕಲ್ಯಾಣಮಂಟಪ ಹಾಗೂ ಗೀತಾ ಮಂದಿರ ನಿರ್ಮಾಣದಲ್ಲಿ ಸರ್ಕಾರ ಕಳುಹಿಸಿ ಕೊಟ್ಟಿರುವ ಮಾರ್ಗಸೂಚಿಯನ್ನು ಅಂಗೀಕರಿಸಬಹುದೆಂದೂ ತೀರ್ಮಾನಿಸಲಾಯಿತು.

* * * *

ತಿರುಪತಿಯ ಎಸ್. ವಿ. ಆರ್. ಆರ್. ಆಸ್ಪತ್ರೆಯಲ್ಲಿ ಮಾನಸಿಕ ಚಿಕಿತ್ಸೆಗಾಗಿ ಎರಡಂತಸ್ತಿನ ವಿಭಾಗೀಯ ಕಟ್ಟಡ ನಿರ್ಮಾಣಕ್ಕೆ ತಿ. ತಿ. ದೇ. ಧನಸಹಾಯ ನೀಡುವಿಕೆಯನ್ನು ಸರಕಾರಕ್ಕೆ ಶಿಫಾರಸುಮಾಡಲು ತೀರ್ಮಾನಿಸಲಾಯಿತು.

* * * *

ಬಾಲಾಜೀ ವಿಕಲಾಂಗ ಸಂಕ್ಷೇಮ ಸಮುದಾಯದಲ್ಲಿ ಅಗತ್ಯವಾದ ಕ್ಷ-ಕಿರಣಯಂತ್ರೋಪಕರಣ ಮೊದಲಾದವುಗಳನ್ನು ಕೊಳ್ಳಲು ತೀರ್ಮಾನಿಸಯಿತು.

* * * *

ಯಾತ್ರಿಕರ ಸಂರಕ್ಷಣೆಯ ದೃಷ್ಟಿಯಿಂದ ತಿ.ತಿ. ದೇ. ರಕ್ಷಣ ಶಾಖೆಯವರಿಗೆ ಆಧುನಿಕ ವಾಕಿ-ಟಾಕಿ ಉಪಕರಣಗಳನ್ನು ನೀಡಬೇಕೆಂದು ತೀರ್ಮಾನಿಸಲಾಯಿತು.

* * * *

ತಿರುಚಾನೂರಿನ ಶ್ರೀ ಪದ್ಮಾವತೀ ಅಮ್ಮನವರ ದೇವಾಲಯದಲ್ಲಿನ ಆರ್ಜಿತ ತಿರುಪ್ಪಾವಡಾ ಸೇವೆಯ ಶುಲ್ಕವನ್ನು ರೂ. 1500/ರಿಂದ ರೂ. 3000/ಕ್ಕೆ ಏರಿಸಲು ತೀರ್ಮಾನಿಸಲಾಯಿತು.

* * * *

ತಿರುಪತಿಯ ಶ್ರೀ ಗೋವಿಂದ ರಾಜಸ್ವಾ
ದೇವಾಲಯದಲ್ಲಿ ಆರ್ಜಿತ ಕಲ್ಯಾಣೋತ್ಸವವ
ಪ್ರವೇಶಗೊಳಿಸಲು ತೀರ್ಮಾನಿಸಿ ಅದರ ಶ
ವನ್ನು ರೂ. 200/ಕ್ಕೆ ನಿಗಧಿಗೊಳಿಸಲಾಯಿ

* * * *

ತಿ. ತಿ. ದೇ. ಪ್ರಕಟಿಸಲು ತೀರ್ಮಾನಿಸಿ
ಸರಳ ತೆಲುಗು ಅನುವಾದ ಸಹಿತದ 'ನನ್ನ
ಭಾರತಂ' ಕೃತಿಯ ಸಂಪಾದಕತ್ವವನ್ನು ಶ್ರೀದಿ
ಕರ್ಲ ವೆಂಕಟಾವಧಾನಿಯವರಿಗೆ ಒಪ್ಪಿಸಲಾಗಿ
ಅವರು ಸ್ವರ್ಗಸ್ಥರಾದ್ದರಿಂದ ಸಂಪಾದಕತ್ವವ
ಮಧುನಾಪಂತುಲ ಸತ್ಯನಾರಾಯಣ ಶಾಸ್ತ್ರಿಯ
ರಿಗೆ ಒಪ್ಪಿಸಲು ತೀರ್ಮಾನಿಸಲಾಯಿತು.

* * * *

ಕಾಟೇಜು ನಿರ್ಮಾಣಯೋಜನೆಯಲ್ಲಿ ದಾ
ಳನ್ನು ಒಪ್ಪುತ್ತ ಶ್ರೀ ಎಂ. ಆರ್ ಛಬ್ರಿಯ
(ದುಬಾಯಿ) ಅವರನ್ನು ಅನ್ನದಾನಯೋಜನೆ
ದಾನ ನೀಡುವಂತೆ ಕೇಳಲು ತೀರ್ಮಾನಿಸ
ಯಿತು.

* * * *

ತಿರುಮಲೆಯ ಎಸ್. ವಿ. ಕ್ಯಾಂಟೀನ್ ಕಾಂ
ಕ್ಸ್‌ನ ಎ. ಟಿ. ಸಿ. ಕ್ಯಾಂಟೀನ್, ಕ್ಯೂಕಾಂಪ್ಲೆ
ನಲ್ಲಿ ಕ್ಯಾಂಟೀನ್ ನಿರ್ವಹಣೆ ನಡೆಸಲು ಹೋಟೆ
ಅನ್ನಪೂರ್ಣ ಅವರಿಗೆ ನೀಡಲು ತೀರ್ಮಾನಿಸ
ಲಾಯಿತು

ಕ್ಯೂಕಾಂಪ್ಲೆಕ್ಸ್‌ನಲ್ಲಿ ಮಾತ್ರ ಕಾಫಿಬೋರ್ಡ
ನವರು ಕಾಫಿ ಮಾರಾಟಮಾಡುವುದನ್ನು ಅ
ಮತಿಸಲು ತೀರ್ಮಾನಿಸಲಾಯಿತು.

* * * *

ತಿ ರು ಮ ಲೆ ಯ ಶ್ರೀವೆಂಕಟೇಶ್ವರಸ್ವಾಮಿ
ಸುಪ್ರಭಾತ ದರ್ಶನ ಶುಲ್ಕವನ್ನು ರೂ. 25 ರಿಂ
ರು. 50 ಕ್ಕೆ ಏರಿಸಲು ತೀರ್ಮಾನಿಸಲಾಯಿತ



ಉಪಕುಲಪತಿ ಶ್ರೀಮತಿ ಕೆ. ರಾಜ್ಯಲಕ್ಷ್ಮೀ ಅವರ ಮುಖ್ಯ ಅತಿಥಿಯಾಗಿ ಮಾತನಾಡಿದರು. ಶ್ರೀ ಎಸ್. ಕೆ. ಜಯಚಂದ್ರ ಅವರು ಸ್ವಾಗತಿಸಿದ ಸಭೆಯನ್ನು ಶ್ರೀ ಮೇಡಸಾನಿ ಮೋಹನ್ ವಂದಿಸಿದರು.

ಹೈದರಾಬಾದಿನ ಲಾಸ್ಯಪ್ರಿಯ ವೃಂದದವರ ಅಲಮೇಲು ಮಂಗಾ ವಿಲಾಸಂ-ಅನ್ನಮಾಚಾರ್ಯ ಸಂಕೀರ್ತನೆಗಳ ರೂಪಕ ಆಕರ್ಷಿಸಿತು. ನಂತರ ಶ್ರೀಮತಿ ಆರ್. ಜಿ. ಶೋಭಾರಾಜು ಅವರ ಗಾಯನ ಸಭೆ ಅದ್ಭುತ ಪ್ರಾಯವಾಗಿದ್ದಿತು. ಇದರೊಂದಿಗೆ ಅನ್ನಮಾಚಾರ್ಯ ಜಯಂತಿ ಉತ್ಸವ ಸಂಪೂರ್ಣ ಹೊಂದಿತು.

## ಕೌತಾಳದಲ್ಲಿ ರಂಗಯ್ಯನವರ ಆರಾಧನೆ

ತಿರುಪತಿ ತಿರುಮಲೆ ದೇವಸ್ಥಾನಗಳ ದಾಸ-ಸಾಹಿತ್ಯ ಪ್ರಾಜೆಕ್ಟ್, ಮೇ ತಿಂಗಳ 24, 25, 26 ದಿನಗಳಲ್ಲಿ ಆಂಧ್ರಪ್ರದೇಶದ ಆದೋನಿ ತಾಲ್ಲೂಕಿನ ಕೌತಾಳದಲ್ಲಿ ಶ್ರೀ ರಂಗಯ್ಯನವರ ಆರಾಧನೆಯನ್ನು ಯಶಸ್ವಿಯಾಗಿ ನೆರವೇರಿಸಿತು.

ಸಾಮೂಹಿಕ ಭಜನಗೋಷ್ಠಿ ಕಾರ್ಯಕ್ರಮಗಳು ಮೂರು ದಿನವೂ ಹಲವಾರು ಸಂಘಗಳಿಂದ ನೆರವೇರಿತು. ಶ್ರೀ ಪಿ. ಎಂ. ಗಲಗಲಿ ಅವರು ರಾಮಾಯಣದ ಪಾತ್ರಗಳ ಬಗ್ಗೆಯೂ, ಶ್ರೀ ಗಿರ್ಯಾಚಾರ್ಯರು ಹರಿದಾಸತತ್ತ್ವದ ಬಗ್ಗೆಯೂ, ಶ್ರೀ ಜಯತೀರ್ಥಾಚಾರ್ಯ ಮಳಗಿಯವರು ದಾಸಸಾಹಿತ್ಯದ ಬಗ್ಗೆಯೂ ಉಪನ್ಯಾಸ ಮಾಲಿಕೆಗಳನ್ನು ಸಮರ್ಪಿಸಿದರು. ದಾಸಸಾಹಿತ್ಯ ಪ್ರಾಜೆಕ್ಟ್‌ನ ಸಲಹಾಸಮಿತಿ ಸದಸ್ಯರು-ಶ್ರೀ ಅರಳು ಮಲ್ಲಿಗೆ ಪಾರ್ಥಸಾರಥಿ, ಶ್ರೀ ಪಂಗಿ ವಸಂತಕುಮಾರ್ ಹಾಗೂ ದಾಸಸಾಹಿತ್ಯ ಪ್ರಾಜೆಕ್ಟ್ ವಿಶೇಷಾಧಿಕಾರಿ ಶ್ರೀ ಕೆ. ಅಪ್ಪಣ್ಣಾಚಾರ್ಯ ಅವರುಗಳು ದಾಸಸಾಹಿತ್ಯದ ವಿವಿಧ ಮುಖಗಳ ಪರಿಚಯೋಪನ್ಯಾಸಗಳನ್ನು ನೀಡಿದರು.

ಆರಾಧನೆಯ ಅಂಗವಾಗಿ ಶ್ರೀ ರಂಗಯ್ಯನವರ ವಂಶಸ್ಥರನ್ನೂ, ಗುರು ಶ್ರೀಶವಿಠಲ ವಂಶಸ್ಥರಾದ ಶ್ರೀ ಕೆ ರಾಘವೇಂದ್ರರಾಯರನ್ನೂ ಸನ್ಮಾನಿಸಲಾಯಿತು.

## ತಿರುಪತಿಯಲ್ಲಿ ಬೇಸಿಗೆಯ ದಾಸಸಾಹಿತ್ಯ ಶಿಕ್ಷಣಶಿಬಿರ

ತಿ. ತಿ. ದೇ. ಗಳ ದಾಸಸಾಹಿತ್ಯ ಪ್ರಾಜೆಕ್ಟ್ ಆಶ್ರಯದಲ್ಲಿ ಈ ಬೇಸಿಗೆಯಲ್ಲಿ ದಾಸಸಾಹಿತ್ಯ ಶಿಕ್ಷಣ ಶಿಬಿರವು 7-6-87 ರಿಂದ 13-6-87 ರ ವರೆಗೆ ಒಂದು ವಾರಕಾಲ ಯಶಸ್ವಿಯಾಗಿ ನಡೆಯಿತು.

ಮೂವತ್ತು ಮಂದಿ ಆಯ್ದ ಶಿಕ್ಷಣಾರ್ಥಿಗಳ ಈ ಶಿಬಿರವನ್ನು 7-6-87 ರಂದು ಬೆಳಗ್ಗೆ ತಿ.ತಿ.ದೇ. ಸಹಕಾರ್ಯನಿರ್ವಹಣಾಧಿಕಾರಿ ಶ್ರೀ ಸಿ. ವಿಶ್ವನಾಥ್ ಅವರು ಉದ್ಘಾಟಿಸಿದರು.

ಶಿಕ್ಷಣ ಶಿಬಿರದಲ್ಲಿ ರಾಮಾಯಣ ಮಹಾಭಾರತಗಳ ಪಾತ್ರಗಳ ಬಗ್ಗೆ ಶ್ರೀ ಪಿ.ಎಂ. ಗಲಗಲಿ ಹಾಗೂ ಶ್ರೀ ಜಯತೀರ್ಥಾಚಾರ್ಯ ಮಳಗಿಯವರು ದಿನವೂ ಬೆಳಗ್ಗೆಯೂ, ಕರ್ನಾಟಕ ಹರಿದಾಸರ ಬಗ್ಗೆ ಶ್ರೀ ಕೆ ಅಪ್ಪಣ್ಣಾಚಾರ್ಯ ಹಾಗೂ ದಾಸಸಾಹಿತ್ಯದ ಬಗ್ಗೆ ಆಚಾರ್ಯ ಭಾರದ್ವಾಜರೂ, ದೇವತೆಗಳ ಬಗ್ಗೆ ವ್ಯಾಸನಕೆರೆ ಪ್ರಭಂಜನರೂ ಶಿಕ್ಷಣವನ್ನೂ ನೀಡಿದರು. ಹರಿದಾಸ ಸಂಕೀರ್ತನೆಗಳನ್ನು ಹಾಡುವುದರ ಪ್ರಾತ್ಯಕ್ಷಿಕೆಯನ್ನು ಶ್ರೀ ಕಟಗಿರಿದಾಸರು ನೀಡಿದರು.

13-6-87 ರಂದು ತಿ. ತಿ. ದೇ. ಸಂರಕ್ಷಣಾಧಿಕಾರಿ ಶ್ರೀ ಎಸ್. ಕೆ. ಜಯಚಂದ್ರ ಅವರ ಅಧ್ಯಕ್ಷತೆಯಲ್ಲಿ ಸಮಾರೋಪ ನಡೆಯಿತು. ಶ್ರೀ ಗೋಪೀನಾಥರೆಡ್ಡಿ (ವಿಜಿಲೆನ್ಸ್ ಸೂಪರಿಂಟೆಂಡೆಂಟ್) ಅವರು ಮುಖ್ಯ ಅತಿಥಿಗಳಾಗಿದ್ದು, ಶಿಬಿರದ ಅಧ್ಯಾಪಕರನ್ನು ಸತ್ಕರಿಸಿದರು.

7-6-87 ರಂದು ಸಂಜೆ ಮದರಾಸಿನ ಶ್ರೀ ವಿ. ಎಸ್. ಕೃಷ್ಣಮೂರ್ತಿರಾವ್ ಅವರ ಸಂಗೀತ ಕಚೇರಿಯೂ, 13-6-87 ರಂದು ಸಂಜೆ ಬೊಂಬಾಯಿ ಸೋದರಿಯರಾದ ಶ್ರೀಮತಿ ಲಲಿತ ಮತ್ತು ಸರೋಜ ಅವರುಗಳ ಸಂಗೀತ ಕಚೇರಿಯೂ ಏರ್ಪಾಡಾಗಿದ್ದವು.

## ದಾಸಸಾಹಿತ್ಯದ ಮೆಟ್ಲೋತ್ಸವ

ತಿ. ತಿ. ದೇ. ಗಳ ದಾಸಸಾಹಿತ್ಯ ಪ್ರಾಜೆಕ್ಟ್ ಆಶ್ರಯದಲ್ಲಿ ಕರ್ನಾಟಕಾಂಧ್ರಗಳ ಸುಮಾರು 20 ಭಜನ ಮಂಡಲಿಗಳು ತಿರುಮಲೆಯ ಮೆಟ್ಲ ಉತ್ಸವದಲ್ಲಿ ಪಾಲುಗೊಂಡು ಯಶಸ್ವಿಗೊಳಿಸಿದವು.

14-6-87 ರಂದು ಎಲ್ಲ ಭಜನೆಮಂಡಲಿಗಳೂ ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ದೇವಾಲಯದಿಂದ ಶ್ರೀ ಅನ್ನಾರಾವ್ ಅವರ ನೇತೃತ್ವದಲ್ಲಿ ಆರಂಭವಾಗಿ ಹರಿದಾಸರ ಚಿತ್ರಪಟಗಳೊಂದಿಗೆ ಊರ ಮೆರವಣಿಗೆಯಲ್ಲಿ ಭಜನೆ ಮಾಡುತ್ತ ಶ್ರೀ ಅನ್ನಮಾಚಾರ್ಯ ಕಲಾಮಂದಿರದಲ್ಲಿ ಸೇರಿದ ನಂತರ, ಶ್ರೀ ಅನ್ನಮಾಚಾರ್ಯ ಪ್ರಾಜೆಕ್ಟ್ ಕಲಾವಿದರ ಹರಿದಾಸ ಸಂಕೀರ್ತನ ಸಂಗೀತ ಸಭೆ ನಡೆಯಿತು. ಶ್ರೀ ಪಿ. ವಿ. ಆರ್. ಕೆ. ಪ್ರಸಾದ್ (ಕಮೀಷನರ್, ಎಕ್ಸೈಸ್) ಹಾಗೂ ಶ್ರೀ ದೇವನಾಥನ್ (ತಿ.ತಿ.ದೇ. ಬೋರ್ಡ್ ಸದಸ್ಯರು), ಶ್ರೀ ಅರಳು-ಮಲ್ಲಿಗೆ ಪಾರ್ಥಸಾರಥಿ, ಶ್ರೀ ಕೆ. ಅಪ್ಪಣ್ಣಾ-ಚಾರ್ಯ ಅವರುಗಳು ಉಪನ್ಯಾಸಮಾಡಿದರು. ಪ್ರೊ॥ ಭರದ್ವಾಜರ ಶಿಷ್ಯ ಶ್ರೀ ಸುಬ್ರಾಯಭಟ್ಟ ಅವರು ಸಂಪದ ರಂಗ ಎಂಬ ನಾಟಕೆಯನ್ನು ಪ್ರಸ್ತುತ ಪಡಿಸಿದರು.

15-6-87 ರಂದು ಬೆಳಗ್ಗೆ ತಿರುಪತಿಯ ಅಲಿಪಿರಿಯಲ್ಲಿ ಭಜನಮಂಡಳಿಗಳೆಲ್ಲ ಸೇರಿ ಶ್ರೀಪಾದರಾಜಮಠದ ಶ್ರೀ ಶ್ರೀ ವಿಜ್ಞಾನನಿಧಿ ತೀರ್ಥರ ಹಿರಿತನದಲ್ಲಿ ಭಜನ ಗಾಯನಗಳೊಂದಿಗೆ ಮೆಟ್ಟಿಲು ಪೂಜೆ ಮಾಡುತ್ತ ತಿರುಮಲೆಯನ್ನು ಸೇರಿದವು. ದೇವಾಲಯದ ಅಧಿಕಾರಿಗಳು ಗರುಡಾದ್ರಿನಗರದ ಟೋಲ್‌ಗೇಟಿನ ಬಳಿ ಭಜನ ಬೃಂದವನ್ನು ಸ್ವಾಗತಿಸಿದರು. ಅಂದು ಸಂಜೆ ಶ್ರವಣ ನಕ್ಷತ್ರ ಪ್ರಯುಕ್ತ ಶ್ರೀ ವೆಂಕಟೇಶ್ವರ ಸ್ವಾಮಿ ದೀಪೋತ್ಸವದಲ್ಲಿ ಭಜನ ಬೃಂದ ಹರಿದಾಸ ಸಂಕೀರ್ತನೆಗಳನ್ನು ಹಾಡಿ ಮೆರವಣಿಗೆಯಲ್ಲಿ ಭಾಗವಹಿಸಿತು.

ತಿರುಮಲೆಯ ಸದಸ್ ಹಾಲಿನಲ್ಲಿ ಏರ್ಪಾಡಾಗಿದ್ದ ಕಾರ್ಯಕ್ರಮದಲ್ಲಿ ಶ್ರೀ ಶ್ರೀ ವಿಜ್ಞಾನನಿಧಿ ತೀರ್ಥರು, ಶ್ರೀ ದೇವನಾಥನ್ ಹಾಗೂ ತಿ.ತಿ.ದೇ. ಸಂರಕ್ಷಣಾಧಿಕಾರಿ ಎಸ್. ಕೆ. ಜಯಚಂದ್ರ ಅವರ ನೇತೃತ್ವದಲ್ಲಿ, ಮೆಟ್ಲ ಉತ್ಸವದಲ್ಲಿ ಭಾಗವಹಿಸಿದ ಭಜನಮಂಡಲಿಗಳಿಗೆ ಭಜನ ವಾದ್ಯಗಳನ್ನೂ (ಶ್ರುತಿಪೆಟ್ಟಿಗೆ, ತಾಳ, ಖಂಜಿರ ಮೊದಲಾದವು) ಶ್ರೀ ವೆಂಕಟೇಶ್ವರಸ್ವಾಮಿ ಚಿತ್ರಪಟಗಳನ್ನೂ ಬಹುಮಾನಿಸಲಾಯಿತು. (ಚಿತ್ರಗಳನ್ನು ರಕ್ಷಾಪತ್ರದ ಒಳ ಪುಟಗಳಲ್ಲಿ ಕಾಣಬಹುದು.)

## ಡಾ॥ ಮಾಸ್ತಿಯವರ ಜನ್ಮ ಪುಣ್ಯದಿನ

ಜೂನ್ 6 ರಂದು ಮಾಸ್ತಿ ಗ್ರಾಮದಲ್ಲಿ ಜ್ಞಾನಪೀಠ ಪ್ರಶಸ್ತಿ ವಿಜೇತ ಡಾ॥ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರ ಜನ್ಮೋತ್ಸವ ಹಾಗೂ ಪುಣ್ಯದಿನವನ್ನು ಸರಳವಾಗಿ ಆಚರಿಸಲಾಯಿತು.

**ಮುಂದಿನ ಸಂಚಿಕೆಯಲ್ಲಿ .... .... ....**

**ಸಪ್ತಗಿರಿ. — ಆಗಸ್ಟ್ 1987**

**ಕರ್ಮಯೋಗ**
– ವಾಸುದೇವ ಭಟ್

**ದ್ವೈಪಾಯನರು ಹಾಗೂ ಭಾರತ ಕಥೆ**
– ಕೆ. ಜಗನ್ನಾಥ ಶಾಸ್ತ್ರಿ

**ಪಣಂಬೂರ ಗಣೇಶ**
– ಕೆ. ವೆಂಕಟರಾಮಾಚಾರ್ಯ

**ಶಂಖ**
– ಆದ್ಯರಾಮಾಚಾರ್ಯ

**ವಿಖನಸಾಚಾರ್ಯ**
– ಶ್ರೀನಿಧಿ ವರದಾಚಾರ್

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.** ಬೆಲೆ: ರೂ. 1–00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12–00 ಮಾತ್ರ. ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದದಲ್ಲೂ ಬರೆಯಬೇಕು. ಬರೆಯಿರಿ – ಸಂಪಾದಕರು
ಸೇಲ್ಸ್‌ವಿಂಗ್. ತಿ.ತಿ.ದೇ. ತಿರುಪತಿ.

# ತಿಂಗಳಿನ ಮುಖ್ಯದಿನಗಳು

## ಆಗಸ್ಟ್ 1987

| | | |
|---|---|---|
| 4. | ಮಂಗಳವಾರ | ತಿರುಮಲೆಯಲ್ಲಿ ಶ್ರೀ ವೆಂಕಟೇಶ್ವರಸ್ವಾಮಿ ಪವಿತ್ರೋತ್ಸವ ಅಂಕುರಾರ್ಪಣೆ |
| 7. | ಶುಕ್ರವಾರ | " " " ಸಮಾಪ್ತಿ<br>ವರಲಕ್ಷ್ಮೀ ವ್ರತ. |
| 8. | ಶನಿವಾರ | ಆಳವಂದಾರ್ ವರ್ಷತಿರುನಕ್ಷತ್ರ |
| 9. | ಭಾನುವಾರ | ಶ್ರೀ ವೈಖಾನಸ ಮಹರ್ಷಿ ಜಯಂತಿ |
| 15. | ಶನಿವಾರ | ಭಾರತ ಸ್ವಾತಂತ್ರ್ಯೋತ್ಸವ |
| 16. | ಭಾನುವಾರ | ಗೋಕುಲಾಷ್ಟಮಿ |
| 17. | ಸೋಮವಾರ | ತಿರುಮಲೆಯಲ್ಲಿ ಉಟ್ಲ ಉತ್ಸವ |
| 18. | ಮಂಗಳವಾರ | ಶ್ರೀ ಕೋದಂಡರಾಮಸ್ವಾಮಿ ಉಟ್ಲ ಉತ್ಸವ |
| 19. | ಬುಧವಾರ | ಶ್ರೀ ಗೋವಿಂದರಾಜಸ್ವಾಮಿ ಕಿರಿಯಬೀದಿ ಉಟ್ಲ ಉತ್ಸವ |
| 20. | ಗುರುವಾರ | ಶ್ರೀ ಗೋವಿಂದರಾಜಸ್ವಾಮಿ ದೊಡ್ಡಬೀದಿ ಉಟ್ಲ ಉತ್ಸವ |
| 26. | ಬುಧವಾರ | ಬಲರಾಮಜಯಂತಿ |
| 27. | ಗುರುವಾರ | ಶ್ರೀ ವರಾಹಜಯಂತಿ |
| 28. | ಶುಕ್ರವಾರ | ವಿನಾಯಕ ಚತುರ್ಥಿ |
| 29. | ಶನಿವಾರ | ಋಷಿಪಂಚಮಿ. |

ಕೋಲಾರಜಿಲ್ಲಾ ಪರಿಷತ್ ಅಧ್ಯಕ್ಷ ಶ್ರೀ
ಎಂ. ಕೃಷ್ಣಪ್ಪನವರ ಅಧ್ಯಕ್ಷತೆಯಲ್ಲಿ ನಡೆ
ಸಮಾರಂಭದಲ್ಲಿ ಡಾ॥ ಮಾಸ್ತಿಯವರ ಶ
ದೇವಿ ಕವನದ ಬಗ್ಗೆ ಶ್ರೀ ಕೆ. ಆರ್. ಜ
ಅವರೂ, ಮಾಸ್ತಿ ಸಾಹಿತ್ಯ ಹಾಗೂ ಜೀವ
ಬಗ್ಗೆ ಶ್ರೀ ಕೆ. ಆರ್. ನರಸಿಂಹನ್ ಅವರೂ
ನಾಡಿದರು. ಸ್ಥಳೀಯ ಶಾಸಕ ಶ್ರೀ ಎಚ್
ದ್ಯಾವರಪ್ಪ ಹಾಗೂ ಮಾಜಿ ಮಂತ್ರಿ ಶ್ರೀ
ಸಿ. ಲಿಂಗಾರೆಡ್ಡಿ ಅವರುಗಳು ಮುಖ್ಯ
ಗಳಾಗಿ ಮಾತನಾಡಿದರು.

ಸಮಾರಂಭದ ಅಂಗವಾಗಿ ಡಾ॥ ಮ
ಸ್ಮಾರಕ ದತ್ತಿ ಏರ್ಪಡಿಸಿದ್ದ ಪ್ರಬಂಧ ಗಾ
ಸ್ಪರ್ಧೆಗಳಲ್ಲಿ ವಿಜೇತರಾದವರಿಗೆ ಬಹುವ
ಗಳನ್ನು ಜಿಲ್ಲಾಧಿಕಾರಿ ಶ್ರೀ ಡಿ. ತಂಗರ
ಅವರು ವಿತರಿಸುತ್ತ ಮಾಸ್ತಿಯವರ ಹೆ
ಸ್ಥಳೀಯ ಗ್ರಂಥ ಭಂಡಾರ ನಿರ್ಮಾಣ ಕಾ
ಬೇಗ ಪೂರೈಸಿ ಎಲ್ಲರಿಗೂ ಸಾಹಿತ್ಯ ಹತ್ತಿರ
ದೊರಕುವಂತೆ ಆಗಲಿ ಎಂದು ಹಾರೈಸಿದರು.

ನೆಹರೂ ಯುವಕ ಕೇಂದ್ರ ಹಾಗೂ ಮ
ಮಂಡಲ ಪಂಚಾಯತಿ ಸಹಕರಿಸಿದ ಸಮಾರಂ
ಸಂಸ್ಕೃತಿ – ಸುದಿನದಂಗವಾಗಿ ಶ್ರೀ ವಿಠ
ಮೂರ್ತಿ ಹಾಗೂ ಸಂಗಡಿಗರಿಂದ ಸಂ
ಸಭೆಯೂ ನಡೆಯಿತು. ಜಿಲ್ಲಾ ವಾರ್ತಾಪ್ರ
ಇಲಾಖೆಯ ವತಿಯಿಂದ ಮಾಸ್ತಿ, ಡಿ. ವಿ.
ಮುಂತಾದವರ ಹಾಗೂ ಜಿಲ್ಲಾ ಆರೋ
ಇಲಾಖೆಯವರ ಸಾಕ್ಷ್ಯಚಿತ್ರ ಪ್ರದರ್ಶನಗ
ನಡೆದವು.

ಡಾ॥ ಮಾಸ್ತಿ ಸ್ಮಾರಕ ದತ್ತಿಯ ವ್ಯವಸ್ಥಾ
ಶ್ರೀ ಬಿ ವಿ. ನರಸಿಂಹ ಮೂರ್ತಿ ಅವರು ಸ್ವಾ
ಸಿದ ಸಭೆಯಲ್ಲಿ ಶ್ರೀ ಗೋರಂಗಪ್ಪ ಅವರು ವ
ಯನ್ನು ಓದಿದರು. ಮಾಸ್ತಿ ಮಂಡಲ ಪ್ರಧಾ
ಶ್ರೀ ಕೆ. ಆರ್. ಕೃಷ್ಣೇಗೌಡ ವಂದಿಸಿದರು.



Edited and Published on behalf of the T. T. Devasthanams by K. Subba Rao, M.A., and Printed at
T. T. D. Press by M. Vijayakumar Reddy, Manager, T. T. D. Press, Tirupati – 517501.

